598. ನನಗಾಗಿ ಶತ್ರುಗಳಿಗೆ ಪ್ರತಿದಂಡನೆ
ಯನ್ನುಂಟು ಮಾಡಿದಾತನೇ ಸ್ತೋತ್ರ  ಕೀರ್ತ 18:47

599. ನನ್ನ ಕೆಡುಕಿಗೆ ಸಮಯ ನೋಡು
ವವರು ತಾವೇ ಕೇಡನ್ನು ಅನುಭವಿಸು
ವಂತೆ ಮಾಡಿದಾತನೇ ಸ್ತೋತ್ರ  ಕೀರ್ತ 54:5

600 ನನ್ನ ವಿರೋಧಿಗಳಿಗುಂಟಾದ
ಶಿಕ್ಷೆಯನ್ನು ನಾನು ನೋಡುವಂತೆ
ಮಾಡಿದಾತನೇ ಸ್ತೋತ್ರ  ಕೀರ್ತ 59:10

601 ನನ್ನ ಕೆಡುಕಿಗೆ ಪ್ರಯತ್ನಿಸಿದವರು
ಆಶಾಭಂಗಪಟ್ಟು ಅಪಮಾನ ಹೊಂದು
ವಂತೆ ಮಾಡಿದಾತನೇ ಸ್ತೋತ್ರ  ಕೀರ್ತ 71:24

602. ನನ್ನ ವೈರಿಗಳಿಗಿಂತ ನನ್ನನ್ನು
ಬುದ್ಧಿವಂತನನ್ನಾಗಿ ಮಾಡಿ
ದಾತನೇ ಸ್ತೋತ್ರ  ಕೀರ್ತ 119:98

603. ನನಗೆ ಆಲೋಚನೆಗಳನ್ನೂ
ಹೇಳಿಕೊಡುವಾತನೇ ಸ್ತೋತ್ರ  ಕೀರ್ತ 16:7

604. ಹಸಿರುಗಾವಲಲ್ಲಿ ನನ್ನನ್ನು
ತಂಗಿಸಿದಾತನೇ ಸ್ತೋತ್ರ  ಕೀರ್ತ 23:2

605. ವಿಶ್ರಾಂತಿಕರವಾದ ನೀರುಗಳ
ಬಳಿ ಮಾಡಿದಾತನೇ ಸ್ತೋತ್ರ  ಕೀರ್ತ 23:2

606. ನನ್ನ ಪ್ರಾಣವನ್ನು ಉಜ್ಜೀವಿಸ ಮಾಡಿದ್ದಕ್ಕಾಗಿ ಸ್ತೋತ್ರ ಕೀರ್ತ 23:3

607. ನನ್ನನ್ನು ತನ್ನ ಹೆಸರಿಗೆ ತಕ್ಕಂತೆ ನೀತಿ ಮಾರ್ಗದಲ್ಲಿ ನಡಿಸುವಾತನೇ ಸ್ತೋತ್ರ ಕೀರ್ತ 23:3

608. ನಾನು ಕಾರ್ಗತ್ತಲಿನ ಕಣಿವೆಯಲ್ಲಿ ನಡೆಯುವಾಗಲೂ ನೀನು ಹತ್ತಿರವಿರುವದಕ್ಕಾಗಿ ಸ್ತೋತ್ರ ಕೀರ್ತ 23:4

609. ನಿನ್ನ ದೊಣ್ಣೆಯೂ ನಿನ್ನ ಕೋಲೂ ನನಗೆ ಧೈರ್ಯಕೊಡುವುದಕ್ಕಾಗಿ ಸ್ತೋತ್ರ ಕೀರ್ತ 23:4

610. ವೈರಿಗಳ ಮುಂದೆಯೇ ನೀನು ನನಗೋಸ್ಕರ ಔತಣವನ್ನು ಸಿದ್ಧಪಡಿಸಿದ್ದಕ್ಕಾಗಿ ಸ್ತೋತ್ರ ಕೀರ್ತ 23:5

611. ನನ್ನ ತಲೆಗೆ ತೈಲವನ್ನು ಹಚ್ಚಿಸುವಾತನೇ ಸ್ತೋತ್ರ ಕೀರ್ತ 23:5

612. ನನ್ನ ಪಾತ್ರೆಯು ತುಂಬಿ ಹೊರ ಸೂಸುವಂತೆ ಮಾಡಿದಾತನೇ ಸ್ತೋತ್ರ ಕೀರ್ತ 23:5

613. ನನ್ನನ್ನು ಹಿಂಬಾಲಿಸುವ ನಿನ್ನ ಶುಭ ಕ್ಕಾಗಿಯೂ ಕೃಪೆಗಾಗಿಯೂ ಸ್ತೋತ್ರ ಕೀರ್ತ 23:6

614. ನಿನ್ನ ಕೃಪೆಯನ್ನು ನನ್ನ ದೃಷ್ಟಿಯಲ್ಲೇ ಇಟ್ಟುಕೊಂಡಿರುವುದಕ್ಕಾಗಿ ಸ್ತೋತ್ರ ಕೀರ್ತ 26:3

615. ನನಗೆ ಸಹಾಯವು ಉಂಟಾದ
ಕ್ಕಾಗಿ ಸ್ತೋತ್ರ ಕೀರ್ತ 28:7

616. ನನ್ನ ಆಯುಷ್ಕಾಲವು ನಿನ್ನ
ಕೈಯಲ್ಲಿರುವದಕ್ಕಾಗಿ ಸ್ತೋತ್ರ ಕೀರ್ತ 31:15

617. ಆಪತ್ಕಾಲದಲ್ಲಿ ನನ್ನನ್ನು ಗುಪ್ತ
ಸ್ಥಳದಲ್ಲಿ ಅಡಗಿಸುವಾತನೇ ಸ್ತೋತ್ರ ಕೀರ್ತ 27:5

618. ಮನುಷ್ಯರ ಒಳಸಂಚುಗಳಿಂದ ಹಾನಿ
ಯುಂಟಾಗದಂತೆ ಅವರನ್ನು ನಿನ್ನ
ಸಾನಿಧ್ಯದಲ್ಲಿಯೇ ಮರೆಮಾಡು
ವಾತನೇ ಸ್ತೋತ್ರ ಕೀರ್ತ 31:20

619. ನಾನು ಮೊರೆಯುಡುವಾಗ
ಹತ್ತಿರವಿರುವಾತನೇ ಸ್ತೋತ್ರ ಕೀರ್ತ 145:18

620. ನನ್ನನ್ನು ಸ್ವಸ್ಥಮಾಡುವಾತನೇ ಸ್ತೋತ್ರ ಕೀರ್ತ 30:2

621. ನನ್ನ ಪ್ರಾಣವನ್ನು ಪಾತಾಳದಿಂದಲೂ
ಎತ್ತಿದ್ದಕ್ಕಾಗಿ ಸ್ತೋತ್ರ ಕೀರ್ತ 30:3

622. ತಂದೆ ತಾಯಿಗಳು ತೊರೆದು
ಬಿಟ್ಟರೂ ನನ್ನನ್ನು ಸೇರಿಸಿಕೊಳ್ಳುವ
ಕರ್ತನೇ ಸ್ತೋತ್ರ ಕೀರ್ತ 27:10

623. ನನ್ನ ಹೃದಯವನ್ನು ಧೈರ್ಯ
ಪಡಿಸುವ ಕರ್ತನೇ ಸ್ತೋತ್ರ ಕೀರ್ತ 27:14

624. ನನ್ನನ್ನು ಉದ್ಧರಿಸಿದಾತನೇ ಸ್ತೋತ್ರ ಕೀರ್ತ 30:1

625. ನನ್ನನ್ನು ನಾಶನದ ಗುಂಡಿಯಿಂದೆತ್ತಿ ದಾತನೇ ಸ್ತೋತ್ರ ಕೀರ್ತ 40:2

626. ಕೆಸರಿನೊಳಗಿಂದ ನನ್ನನ್ನು ತೆಗೆದು ಬಂಡೆಯ ಮೇಲೆ ನಿಲ್ಲಿಸಿ ದಾತನೇ ಸ್ತೋತ್ರ ಕೀರ್ತ 40:2

627. ಮರಣ ದ್ವಾರದೊಳಗೆ ಸೇರಿಸದೆ ನನ್ನನ್ನು ಉದ್ಧರಿಸುವಾತನೇ ಸ್ತೋತ್ರ ಕೀರ್ತ 9:13

628. ನನ್ನ ಪ್ರಾಣವನ್ನು ಪಾತಾಳ ದಿಂದಲೂ ಎತ್ತಿದಾತನೇ ಸ್ತೋತ್ರ ಕೀರ್ತ 30:3

629. ನನ್ನ ಪ್ರಾಣವನ್ನು ಪಾತಾಳದಿಂದ ತಪ್ಪಿಸಿದ್ದಿಯಲ್ಲಾ ಸ್ತೋತ್ರ ಕೀರ್ತ 86:13

630. ನನ್ನ ಪ್ರಾಣವನ್ನು ಮರಣದಿಂದ ತಪ್ಪಿಸಿದಾತನೇ ಸ್ತೋತ್ರ ಕೀರ್ತ 116:9

631. ನನ್ನ ಆತ್ಮಕ್ಕೆ ಬಲವನ್ನು ಕೊಟ್ಟು ನನ್ನನ್ನು ಧೈರ್ಯಪಡಿಸಿದ್ದಕ್ಕಾಗಿ ಸ್ತೋತ್ರ ಕೀರ್ತ 138:3

632. ನನ್ನ ಆತ್ಮವನ್ನು ಎಲ್ಲಾ ಇಕ್ಕಟ್ಟಿನಿಂದ ತಪ್ಪಿಸಿ ಕಾಪಾಡುವಾತನೇ ಸ್ತೋತ್ರ 1 ಅರಸು 1:29

633. ನನ್ನ ಪಾಪವು ಪರಿಹಾರವಾದ ದ್ದಕ್ಕಾಗಿ ಸ್ತೋತ್ರ ಕೀರ್ತ 32:1

634. ನನ್ನ ಪಾಪವನ್ನು ಕ್ಷಮಿಸಿ ದಾತನೇ ಸ್ತೋತ್ರ — ಕೀರ್ತ 32:1

635. ನನ್ನ ಅಪರಾಧಗಳನ್ನು ಎಣಿಸದೆ ಇರುವಾತನೇ ಸ್ತೋತ್ರ — ಕೀರ್ತ 32:2

636. ನನ್ನ ಪಾಪವನ್ನು ನನ್ನ ದೋಷ ವನ್ನು ಮನ್ನಿಸಿದಾತನೇ ಸ್ತೋತ್ರ — ಕೀರ್ತ 32:5

637. ನನ್ನ ಪಾಪಗಳನ್ನೆಲ್ಲಾ ನಿನ್ನ ಬೆನ್ನ ಹಿಂದೆ ಹಾಕಿಬಿಟ್ಟಾತನೇ ಸ್ತೋತ್ರ — ಯೆಶಾ 38:17

638. ನನ್ನ ಎಲ್ಲಾ ಅಪರಾಧಗಳನ್ನು ಕ್ಷಮಿಸಿ ಸಮಸ್ತ ರೋಗಗಳನ್ನು ವಾಸಿ ಮಾಡಿದ್ದಕ್ಕಾಗಿ ಸ್ತೋತ್ರ — ಕೀರ್ತ 103:4

639. ನನ್ನ ಜೀವವನ್ನು ನಾಶದಿಂದ ತಪ್ಪಿಸುವಾತನೇ ಸ್ತೋತ್ರ — ಕೀರ್ತ 103:4

640. ಪ್ರೀತಿ ಕೃಪೆಗಳೆಂಬ ಕಿರೀಟದಿಂದ ನನ್ನನ್ನು ಶೃಂಗರಿಸಿದ್ದಕ್ಕಾಗಿ ಸ್ತೋತ್ರ — ಕೀರ್ತ 103:4

641. ಚೈತನ್ಯ ತೈಲದಿಂದ ನನ್ನನ್ನು ಅಭಿಷೇಕಿಸಿದ್ದಕ್ಕಾಗಿ ಸ್ತೋತ್ರ — ಕೀರ್ತ 92:10

642. ಶ್ರೇಷ್ಠ ವರಗಳಿಂದ ನನ್ನ ಆಶೆಯನ್ನು ಪೂರ್ತಿಗೊಳಿಸಿದ್ದಕ್ಕಾಗಿ ಸ್ತೋತ್ರ — ಕೀರ್ತ 103:5

643. ನನ್ನ ಬಾಯಲ್ಲಿ ದೇವರನ್ನು ಸ್ತುತಿಸಲು ನೂತನ ಕೀರ್ತನೆಯನ್ನು ಹುಟ್ಟಿಸಿದಾತನೇ ಸ್ತೋತ್ರ ಕೀರ್ತ 40:3

644. ನನಗೆ ಮರೆಯೂ ನಿರಪಾಯವಾಗಿಯೂ ನನ್ನನ್ನು ಕಾಯುವಾತನೇ ಸ್ತೋತ್ರ ಕೀರ್ತ 32:7

645. ನನ್ನ ಗೋಳಾಟವನ್ನು ತಪ್ಪಿಸಿ ಸಂತೋಷದಿಂದ ಕುಣಿದಾಡುವಂತೆ ಮಾಡಿದಾತನೇ ಸ್ತೋತ್ರ ಕೀರ್ತ 30:11

646. ನಾನು ಕಟ್ಟಿಕೊಂಡಿದ್ದ ಗೋಣಿತಟ್ಟನ್ನು ತೆಗೆದು ಬಿಟ್ಟು ಹರ್ಷವಸ್ತ್ರವನ್ನು ನನಗೆ ಧಾರಣೆ ಮಾಡಿದಾತನೇ ಸ್ತೋತ್ರ ಕೀರ್ತ 30:11

647. ಮಮತೆಯ ಹಗ್ಗದಿಂದ ಸೆಳೆದು ಕೊಂಡಾತನೇ ಸ್ತೋತ್ರ ಹೋಶೇ 11:4

648. ಕರ್ತನೇ ನನಗೆ ಹಿತಚಿಂತಕ ನಾಗಿರುವುದಕ್ಕಾಗಿ ಸ್ತೋತ್ರ ಕೀರ್ತ 40:17

649. ನಮ್ಮನ್ನು ಸ್ವೀಕಾರ ಮಾಡುವಾತನೇ ಸ್ತೋತ್ರ ಕೀರ್ತ 49:15

650. ನಮ್ಮನ್ನು ಉದ್ಧಾರ ಮಾಡುವಾತನೇ ಸ್ತೋತ್ರ ಕೀರ್ತ 55:22

651. ದೇವರೇ ನನ್ನ ಸಂಗಡ
ಇರುವುದಕ್ಕಾಗಿ ಸ್ತೋತ್ರ ಕೀರ್ತ 56:9

652. ಭಯಂಕರ ಶೂರನಾಗಿ ನನ್ನ
ಸಂಗಡ ಇರುವುದಕ್ಕಾಗಿ ಸ್ತೋತ್ರ ಯೆರೆ 20:11

653. ಎಲ್ಲಾ ಭೀತಿಯಿಂದ ನನ್ನನ್ನು
ತಪ್ಪಿಸಿದಾತನೇ ಸ್ತೋತ್ರ ಕೀರ್ತ 34:4

654. ನನ್ನ ಇಷ್ಟಾರ್ಥಗಳನ್ನು
ನೆರವೇರಿಸುವಾತನೇ ಸ್ತೋತ್ರ ಕೀರ್ತ 37:4

655. ನಿನ್ನ ಎಡದ ಕೈ ನನಗೆ ತಲೆದಿಂಬಾ
ಗಿರುವುದಕ್ಕೋಸ್ಕರ ಸ್ತೋತ್ರ ಪ.ಗೀತ 2:6

656. ಲೋಕವೆಲ್ಲಾ ನಿನ್ನನ್ನು ಹೊಗಳಿ
ಕೊಂಡಾಡುವುದಕ್ಕಾಗಿ ಸ್ತೋತ್ರ ಕೀರ್ತ 48:10

657. ನಿನ್ನ ಬಲಗೈಯಿಂದ ನನ್ನನ್ನು
ತಬ್ಬಿಕೊಂಡು ಸಂತೋಷ
ಪಡಿಸಿದ್ದಕ್ಕಾಗಿ ಸ್ತೋತ್ರ ಪ.ಗೀತ 2:6

658. ನಿನ್ನ ಬಲಗೈ ನೀತಿಯನ್ನು
ನೆರವೇರಿಸಿದ್ದಕ್ಕಾಗಿ ಸ್ತೋತ್ರ ಕೀರ್ತ 48:10

659. ನೀನು ನೀತಿ ನ್ಯಾಯಗಳನ್ನು ಪ್ರೀತಿ
ಸುವವನಾಗಿದ್ದಿ ಆದಕ್ಕಾಗಿ ಸ್ತೋತ್ರ ಕೀರ್ತ 33:5

660. ಸತ್ಯಾನುಸಾರ ನುಡಿದು ನೆಟ್ಟನೆಯ ಮಾತುಗಳನ್ನಾಡುವಾತನೇ ಸ್ತೋತ್ರ ಯೆಶಾ 45:19

661. ನನ್ನ ನೀತಿಯನ್ನು ಉದಯದ ಬೆಳಕಿನಂತೆಯೂ ನನ್ನ ನ್ಯಾಯವನ್ನು ಮಧ್ಯಾಹ್ನದ ತೇಜಸ್ಸಿನಂತೆಯೂ ಪ್ರಕಾಶಗೊಳಿಸುವಾತನೇ ಸ್ತೋತ್ರ ಕೀರ್ತ 37:6

662. ದೇವರೇ ನನ್ನ ಹರಕೆಗಳಿಗೆ ಲಕ್ಷ ಕೊಡುವಾತನೇ ಸ್ತೋತ್ರ ಕೀರ್ತ 61:5

663. ನನ್ನ ಬಿನ್ನಹವನ್ನು ತಿರಸ್ಕರಿಸಲಿಲ್ಲ ವಾದ್ದರಿಂದ ಸ್ತೋತ್ರ ಕೀರ್ತ 66:20

664. ನನ್ನ ದೇವರು ನನಗೆ ಪ್ರಸನ್ನನಾಗಿ ಸಹಾಯ ಮಾಡುವುದಕ್ಕಾಗಿ ಸ್ತೋತ್ರ ಕೀರ್ತ 59:10

665. ತಾಯಿಯ ಗರ್ಭದಲ್ಲಿ ನನ್ನನ್ನು ರೂಪಿಸಿ ಕಾಪಾಡಿದ ದೇವರಿಗೆ ಸ್ತೋತ್ರ ಕೀರ್ತ 139:13

666. ನನ್ನನ್ನು ಅದ್ಭುತವಾಗಿಯೂ ವಿಚಿತ್ರವಾಗಿಯೂ ರಚಿಸಿದ್ದರಿಂದ ನಿನಗೆ ಸ್ತೋತ್ರ ಕೀರ್ತ 139:14

667. ನನ್ನ ಅಸ್ಥಿಪಂಜರವು ನಿನಗೆ ಮರೆ ಯಾಗಿಲ್ಲವಾದ್ದರಿಂದ ನಿನಗೆ ಸ್ತೋತ್ರ ಕೀರ್ತ 139:15

668. ನಾನು ಇನ್ನೂ ಕೇವಲ ಪಿಂಡವಾಗಿ ರುವಾಗಲೇ ನಿನ್ನ ಕಣ್ಣುಗಳು ನನ್ನನ್ನು ನೋಡಿದ್ದಕ್ಕಾಗಿ ಸ್ತೋತ್ರ ಕೀರ್ತ 139:16

669. ತಾಯಿ ಹೆತ್ತಂದಿನಿಂದ ನನ್ನ ಉದ್ಧಾರಕನಾಗಿರುವಾತನೇ ಸ್ತೋತ್ರ ಕೀರ್ತ 71:6

670. ನಾನು ಹುಟ್ಟಿದಂದಿನಿಂದ ನಿನ್ನನ್ನೇ ಆತುಕೊಂಡಿದ್ದೇನೆ ಸ್ತೋತ್ರ ಕೀರ್ತ 71:6

671. ದೇವರೇ ಬಾಲ್ಯಾರಭ್ಯ ನನ್ನನ್ನು ಉಪದೇಶಿಸುತ್ತಾ ಬಂದಿರು ವಾತನೇ ಸ್ತೋತ್ರ ಕೀರ್ತ 71:17

672. ನನ್ನ ನಿರೀಕ್ಷೆಯೂ ಭರವಸೆಯೂ ನೀನಾಗಿರುವಾತನೇ ಸ್ತೋತ್ರ ಕೀರ್ತ 71:5

673. ನಾನು ದೇಶಭ್ರಷ್ಟನಾಗಿ ಅಲೆದಾಡಿ ದ್ದನ್ನು ಬಲ್ಲಾತನೇ ಸ್ತೋತ್ರ ಕೀರ್ತ 56:8

674. ದೇವರೇ, ದೂರವಾಗಿರಬೇಡ ನನ್ನ ದೇವರೇ ಬೇಗ ಸಹಾಯ ಮಾಡುವಾತನೇ ಸ್ತೋತ್ರ ಕೀರ್ತ 71:12

675. ನನ್ನ ಪಾದಗಳನ್ನು ಕದಲಗೊಡಿಸ ದಿರುವಾತನೇ ಸ್ತೋತ್ರ ಕೀರ್ತ 121:3

676. ನಿನ್ನ ಚಿತ್ತವನ್ನು ತಿಳಿಯಪಡಿಸಿ, ನನ್ನನ್ನು ನಡಿಸಿ ತರುವಾಯ ಮಹಿಮೆಗೆ ಸೇರಿಸಿಕೊಳ್ಳುವಾತನೇ ಸ್ತೋತ್ರ — ಕೀರ್ತ 73:24

677. ತೂಕಡಿಸದೆ ನನ್ನನ್ನು ಕಾಯುವಾತನೇ ಸ್ತೋತ್ರ — ಕೀರ್ತ 121:3

678. ಹಗಲಲ್ಲಿ ಸೂರ್ಯನು ಇರುಳಲ್ಲಿ ಚಂದ್ರನು ನನ್ನನ್ನು ಬಾಧಿಸದಿರುವದಕ್ಕಾಗಿ ಸ್ತೋತ್ರ — ಕೀರ್ತ 121:6

679. ಕರ್ತನು ನನ್ನನ್ನು ಎಲ್ಲಾ ಕೇಡಿನಿಂದ ತಪ್ಪಿಸುವಾತನಾಗಿರುವದಕ್ಕಾಗಿ ಸ್ತೋತ್ರ — ಕೀರ್ತ 121:7

680. ನಾನು ಹೋಗುವಾಗಲೂ ಬರುವಾಗಲೂ ಇಂದಿನಿಂದ ಸದಾಕಾಲವೂ ನನ್ನನ್ನು ಕಾಪಾಡುವಾತನೇ ಸ್ತೋತ್ರ — ಕೀರ್ತ 121:8

681. ನನ್ನ ಪ್ರಾಣವನ್ನು ಕಾಯುವಾತನೇ ಸ್ತೋತ್ರ — ಕೀರ್ತ 121:7

682. ನನ್ನ ನಡತೆಯೆಲ್ಲಾ ನಿನಗೆ ಗೋಚರವಾಗಿದೆಯಲ್ಲಾ ಕರ್ತನೇ ಸ್ತೋತ್ರ — ಕೀರ್ತ 139:3

683. ನನಗೋಸ್ಕರ ಮುಂದೆ ಹೋಗುವಾತನೇ ಸ್ತೋತ್ರ — ಧರ್ಮೋ 9:3

684. ಕರ್ತನೇ ನೀನು ನನ್ನನ್ನು ಪರೀಕ್ಷಿಸಿ ತಿಳುಕೊಂಡಿದ್ದಕ್ಕಾಗಿ ಸ್ತೋತ್ರ ಕೀರ್ತ 139:1

685. ನಾನು ಕೂತುಕೊಳ್ಳುವದು ಏಳುವುದು ನಿನಗೆ ಗೊತ್ತಿರುವುದಕ್ಕಾಗಿ ಸ್ತೋತ್ರ ಕೀರ್ತ 139:2

686. ದೂರದಿಂದಲೇ ನನ್ನ ಆಲೋಚನೆಗಳನ್ನು ಬಲ್ಲವನಾಗಿರುವಾತನೇ ಸ್ತೋತ್ರ ಕೀರ್ತ 139:2

687. ಕರ್ತನೇ ನನ್ನ ನಾಲಿಗೆಯ ಮಾತು ಗಳಲ್ಲಿ ನೀನು ಅರಿಯದೆ ಇರು ವಂಥದ್ದು ಒಂದೂ ಇಲ್ಲ ಸ್ತೋತ್ರ ಕೀರ್ತ 139:4

688. ನಾನು ನಡೆಯುವುದನ್ನು ಮಲಗು ವುದನ್ನು ಶೋಧಿಸಿ ಗ್ರಹಿಸಿಕೊಳ್ಳು ವಾತನೇ ಸ್ತೋತ್ರ ಕೀರ್ತ 139:3

689. ನಾನು ಇಕ್ಕಟ್ಟಿನ ದಾರಿಯಲ್ಲಿ ನಡೆಯುವಾಗ ನನ್ನನ್ನು ಚೈತನ್ಯ ಗೊಳಿಸುವಾತನೇ ಸ್ತೋತ್ರ ಕೀರ್ತ 138:7

690. ನನ್ನ ಆತ್ಮವು ಕುಂದಿ ಹೋದಾಗ ನನ್ನ ಮಾರ್ಗವನ್ನು ಬಲ್ಲಾತನೇ ಸ್ತೋತ್ರ ಕೀರ್ತ 142:3

691. ಸುತ್ತಲೂ ನನ್ನನ್ನು ಆವರಿಸಿ ನಿನ್ನ ಕೈಯನ್ನು ನನ್ನ ಮೇಲೆ ಇಟ್ಟಿರು ವದಕ್ಕಾಗಿ ಸ್ತೋತ್ರ ಕೀರ್ತ 139:5

692. ನನ್ನನ್ನು ಕಠಿಣವಾಗಿ ಶಿಕ್ಷಿಸಿದ್ದಾಗ್ಯೂ ಮರಣಕ್ಕೆ ಒಪ್ಪಿಸದಿರುವದಕ್ಕಾಗಿ ಸ್ತೋತ್ರ ಕೀರ್ತ 118:18

693. ಆತನು ನಮ್ಮನ್ನು ವೈರಿಗಳ ಹಲ್ಲು ಗಳಿಗೆ ಕೊಳ್ಳೆ ಕೊಡಲಿಲ್ಲ ಸ್ತೋತ್ರ ಕೀರ್ತ 124:6

694. ನಾನು ಮೊರೆಯಿಟ್ಟಾಗ ಸದುತ್ತರ ವನ್ನು ದಯಪಾಲಿಸಿದಾತನೇ ಸ್ತೋತ್ರ ಕೀರ್ತ 138:3

695. ದೇವರೆ ನಿನ್ನ ಸಂಕಲ್ಪಗಳು ನನ್ನ ಎಣಿಕೆಯಲ್ಲಿ ಎಷ್ಟು ಗೌರವ ವಾಗಿದೆ ಸ್ತೋತ್ರ ಕೀರ್ತ 139:17

696. ನನ್ನ ಹೆಬ್ಬಾಗಿಲುಗಳ ಅಗುಳಿಗಳನ್ನು ಬಲಪಡಿಸುವಾತನೇ ಸ್ತೋತ್ರ ಕೀರ್ತ 147:13

697. ನನ್ನ ಪ್ರಾಂತದೊಳಗೆ ಸೌಭಾಗ್ಯ ವನ್ನುಂಟು ಮಾಡುವಾತನೇ ಸ್ತೋತ್ರ ಕೀರ್ತ 147:14

698. ತನ್ನ ಕೃಪೆಯನ್ನು ನಿರೀಕ್ಷಿಸುವ ಭಕ್ತ ರಲ್ಲಿ ಆನಂದಪಡುವಾತನೇ ಸ್ತೋತ್ರ ಕೀರ್ತ 147:11

699. ಪ್ರಾರ್ಥನೆಯನ್ನು ನಿರಾಕರಿಸದೆ ನಮ್ಮ ಇಷ್ಟಾರ್ಥವನ್ನು ನೆರವೇರಿಸುವಾತನೇ ಸ್ತೋತ್ರ ಕೀರ್ತ 21:2

700. ದೀನಾವಸ್ಥೆಯಲ್ಲಿರುವಾಗ
ನಮ್ಮನ್ನು ನೆನಪು ಮಾಡಿ
ಕೊಂಡಾತನೇ ಸ್ತೋತ್ರ ಕೀರ್ತ 136:23

701. ನಮ್ಮನ್ನು ನೆನಪು ಮಾಡಿ
ಕೊಳ್ಳುವ ಕರ್ತನೇ ಸ್ತೋತ್ರ ಕೀರ್ತ 115:12

702. ನಮ್ಮನ್ನು ಎದ್ದು ನಿಲ್ಲುವಂತೆ
ಮಾಡುವಾತನೇ ಸ್ತೋತ್ರ ಕೀರ್ತ 20:8

703. ಕುಗ್ಗಿಸಿದ ನೊಗವನ್ನು ಮುರಿದು
ನಾವು ನೆಟ್ಟಗೆ ನಿಂತು ನಡೆಯು
ವಂತೆ ಮಾಡುವಾತನೇ ಸ್ತೋತ್ರ ಯಾಜ 26:13

704. ನಮ್ಮನ್ನು ನಿನ್ನ ಸನ್ನಿಧಿಯಲ್ಲಿ
ಅತ್ಯಾನಂದ ಪಡಿಸಿದಾತನೇ ಸ್ತೋತ್ರ ಕೀರ್ತ 21:6

705. ನಿನ್ನ ಸಂಭ್ರಮದಲ್ಲಿ ನಮಗೆ
ಪಾನ ಮಾಡಿಸುವಾತನೇ ಸ್ತೋತ್ರ ಕೀರ್ತ 36:8

706. ಪರಲೋಕದಿಂದ ಸಹಾಯ ಮಾಡಿ
ನಿಂದಕರ ಬಾಯಿಗೆ ನನ್ನನ್ನು
ತಪ್ಪಿಸುವಾತನೇ ಸ್ತೋತ್ರ ಕೀರ್ತ 57:3

707. ನಮ್ಮ ವೈರಿಗಳನ್ನು ತುಳಿದು
ಬಿಡುವಾತನೇ ಸ್ತೋತ್ರ ಕೀರ್ತ 108:13

708. ಹಿಂಸಕರಿಂದ ಬಿಡಿಸಿದವನೂ ಹಗೆಗಳಿಗೆ ಆಶಾಭಂಗಪಡಿಸಿ ದವನೂ ಆಗಿರುವಾತನೇ ಸ್ತೋತ್ರ ಕೀರ್ತ 44:7

709. ಬೆಳ್ಳಿಯನ್ನು ಪುಟಕ್ಕೆ ಹಾಕುವ ಮೇರೆಗೆ ನಮ್ಮನ್ನು ಶುದ್ಧಿ ಮಾಡಿದಾತನೇ ಸ್ತೋತ್ರ ಕೀರ್ತ 66:10

710. ನಮ್ಮ ನೊಗವನ್ನು ಮುರಿದಾತನೇ ಸ್ತೋತ್ರ ಯಾಜ 26:13

711. ಸಣ್ಣವರು ಮೊದಲುಗೊಂಡು ದೊಡ್ಡವರ ಪರ್ಯಂತರ ಎಲ್ಲರನ್ನೂ ಆಶೀರ್ವದಿಸುವಾತನೇ ಸ್ತೋತ್ರ ಕೀರ್ತ 115:12

712. ನಮ್ಮನ್ನೂ ನಮ್ಮ ಮಕ್ಕಳನ್ನೂ ಅಭಿವೃದ್ಧಿ ಪಡಿಸುವಾತನೇ ಸ್ತೋತ್ರ ಕೀರ್ತ 115:14

713. ನಿನ್ನ ಸೇವಕರ ಮಕ್ಕಳು ಬಾಳುವರು ಅದಕ್ಕಾಗಿ ಸ್ತೋತ್ರ ಕೀರ್ತ 102:28

714. ನಿನ್ನ ಸೇವಕರ ಸಂತತಿಯವರನ್ನು ನಿನ್ನ ಸನ್ನಿಧಾನದಲ್ಲಿ ಸ್ಥಿರಪಡಿಸು ವಾತನೇ ಸ್ತೋತ್ರ ಕೀರ್ತ 102:28

715. ನಿನಲ್ಲಿ ಭಯ ಭಕ್ತಿಯುಳ್ಳವರ ಮೇಲೆ ನಿನ್ನ ದಯೆಯನ್ನು ಯುಗ ಯುಗಾಂತರಗಳವರೆಗೂ ಇರಿಸುವಾತನೇ ಸ್ತೋತ್ರ ಕೀರ್ತ 103:17

716. ಭೂಮಿಯ ಮೇಲೆ ಆಕಾಶವು ಎಷ್ಟು ಉನ್ನತವೋ ನಿನ್ನಲ್ಲಿ ಭಯಭಕ್ತಿಯುಳ್ಳವರ ಮೇಲೆ ನಿನ್ನ ಕೃಪೆಯು ಅಷ್ಟು ಅಪಾರವಾಗಿರುವುದಕ್ಕಾಗಿ ಸ್ತೋತ್ರ ಕೀರ್ತ 103:11

717. ತಂದೆಯು ಮಕ್ಕಳನ್ನು ಕನಿಕರಿಸುವಂತೆ ನಿನ್ನಲ್ಲಿ ಭಯಭಕ್ತಿಯುಳ್ಳವರನ್ನು ಕನಿಕರಿಸುವಾತನೇ ಸ್ತೋತ್ರ ಕೀರ್ತ 103:13

718. ನಮ್ಮ ಅಪರಾಧಗಳಿಗೆ ತಕ್ಕಂತೆ ದಂಡಿಸದಿರುವುದಕ್ಕಾಗಿ ಸ್ತೋತ್ರ ಕೀರ್ತ 103:10

719. ನಮ್ಮ ಪಾಪಗಳಿಗೆ ಸರಿಯಾಗಿ ನಮ್ಮನ್ನು ಶಿಕ್ಷಿಸದಿರುವದಕ್ಕಾಗಿ ಸ್ತೋತ್ರ ಕೀರ್ತ 103:10

720. ಪೂರ್ವಕ್ಕೂ ಪಶ್ಚಿಮಕ್ಕೂ ಎಷ್ಟು ದೂರವೋ ನಮ್ಮ ದ್ರೋಹಗಳನ್ನು ನಮ್ಮಿಂದ ತೆಗೆದು ಅಷ್ಟು ದೂರ ಮಾಡಿದ್ದಕ್ಕಾಗಿ ಸ್ತೋತ್ರ ಕೀರ್ತ 103:12

721. ನಾವು ನಡಿಸಿದ್ದೆಲ್ಲವೂ ನೀನು ನಮಗೋಸ್ಕರ ನಡಿಸಿದ್ದೀ ಸ್ತೋತ್ರ ಯೆಶಾ 26:12

722. ತನ್ನ ಜನರಿಗೆ ತನ್ನ ಪ್ರಜೆಗೆ ಬಲಪರಾಕ್ರಮಗಳನು ದಯಪಾಲಿಸುವಾತನೇ ಸ್ತೋತ್ರ ಕೀರ್ತ 68:35

723. ತನ್ನ ಜನರಿಗೆ ಸುಕ್ಷೇಮವನ್ನು ದಯಪಾಲಿಸುವಾತನೇ ಸ್ತೋತ್ರ ಕೀರ್ತ 29:11

724. ತನ್ನ ಪ್ರಜೆಗೆ ಪ್ರಸನ್ನವಾಗುವಾತನೇ ಸ್ತೋತ್ರ ಕೀರ್ತ 149:4

725. ಆತನು ತನ್ನ ಪ್ರಜೆಗೋಸ್ಕರ ಘನದ ಕೊಂಬನ್ನು ಎಬ್ಬಿಸಿರುವದಕ್ಕಾಗಿ ಸ್ತೋತ್ರ ಕೀರ್ತ 148:14

726. ತನ್ನ ಮಂದೆಯನ್ನು ವಿಚಾರಿಸುವಾತನೇ ಸ್ತೋತ್ರ ಜೆಕರ್ಯ 10:3

727. ತನ್ನ ಮಂದೆಯನ್ನು ಯುದ್ಧದಲ್ಲಿ ಘನವಾದ ಕುದುರೆಯನ್ನಾಗಿ ನಿಲ್ಲಿಸುವಾತನೇ ಸ್ತೋತ್ರ ಜೆಕರ್ಯ 10:3

728. ಬಲವುಳ್ಳ ಕರ್ತನ ಧ್ವನಿಗಾಗಿ ಸ್ತೋತ್ರ ಕೀರ್ತ 29:4

729. ಗಂಭೀರವಾದ ಕರ್ತನ ಧ್ವನಿಗಾಗಿ ಸ್ತೋತ್ರ ಕೀರ್ತ 29:4

730. ದೇವದಾರು ವೃಕ್ಷಗಳು ಮುರಿದು ಬಿಡುವ ನಿನ್ನ ಘರ್ಜನೆಗಾಗಿ ಸ್ತೋತ್ರ ಕೀರ್ತ 29:5

731. ಮಿಂಚುಗಳನ್ನು ಥಳಥಳನೆ ಹೊಳೆಯ ಮಾಡುವ ನಿನ್ನ ಘರ್ಜನೆಗಾಗಿ ಸ್ತೋತ್ರ ಕೀರ್ತ 29:7

732. ಅರಣ್ಯವನ್ನು ಕಂಪಿಸುವಂತೆ ಮಾಡುವ ಘರ್ಜನೆಗಾಗಿ ಸ್ತೋತ್ರ ಕೀರ್ತ 29:8

733. ಗರ್ಭದ ಜಿಂಕೆಗಳು ಈಯುವಂತೆ ಮಾಡುವ ಘರ್ಜನೆಗಾಗಿ ಸ್ತೋತ್ರ ಕೀರ್ತ 29:9

734. ರಕ್ಷಿಸುವ ನಿನ್ನ ಭುಜಬಲಕ್ಕಾಗಿ ಜಯ ಕೊಡುವ ನಿನ್ನ ಹಸ್ತಕ್ಕಾಗಿ ಸ್ತೋತ್ರ ಕೀರ್ತ 44:3

735. ಪ್ರತಾಪವನ್ನು ತೋರ್ಪಡಿಸುತ್ತಾ, ಭೂಮಿಯ ಎಲ್ಲಾ ಕಡೆಗಳಲ್ಲಿ ತನ್ನ ದೃಷ್ಟಿಯನ್ನು ಪ್ರಸರಿಸುವಾತನೇ ಸ್ತೋತ್ರ 2 ಪೂರ್ವ 16:9

736. ನಿನ್ನ ಮುಖ ಪ್ರಕಾಶಕ್ಕಾಗಿ ಸ್ತೋತ್ರ ಕೀರ್ತ 44:3

737. ಬೆಟ್ಟಗಳಲ್ಲಿ ಕೊಳ್ಳೆ ಹೊಡೆಯುವ ತೇಜೋಮಯನೇ ಸ್ತೋತ್ರ ಕೀರ್ತ 76:4

738. ಭೂಮ್ಯಾಕಾಶಗಳಲ್ಲಿಯೂ ವ್ಯಾಪಿಸಿರುವಾತನೇ ಸ್ತೋತ್ರ ಯೆರೆ 23:24

739. ಎಲ್ಲಾದರಲ್ಲಿಯೂ ವ್ಯಾಪಿಸಿರುವಾತನಿಗೆ ಸ್ತೋತ್ರ ಎಫೆ 1:23

740. ತಾನು ಅಭಿಷೇಕಿಸಿದವರಿಗೆ ಆಶ್ರಯವೂ ದುರ್ಗವೂ ಆಗಿರುವಾತನಿಗೆ ಸ್ತೋತ್ರ ಕೀರ್ತ 28:8

741. ನಂಬಿಗಸ್ತರನ್ನು ಕಾಪಾಡುವಾತನಿಗೆ ಸ್ತೋತ್ರ ಕೀರ್ತ 31:23

742. ತನ್ನನ್ನು ಪ್ರೀತಿಸುವವರನ್ನು
ಕಾಪಾಡುವಾತನೇ ಸ್ತೋತ್ರ ಕೀರ್ತ 31:23

743. ಎಲ್ಲರ ಹೃದಯಗಳನ್ನು
ನಿರ್ಮಿಸಿದವನೇ ಸ್ತೋತ್ರ ಕೀರ್ತ 33:15

744. ಪ್ರತಿಯೊಬ್ಬನಿಗೆ ಅವನವನ
ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನು
ಕೊಡುವಾತನೇ ಸ್ತೋತ್ರ ಕೀರ್ತ 62:12

745. ಕರ್ತನ ಭಯಭಕ್ತಿಯುಳ್ಳವರ
ಸುತ್ತಲು ಆತನ ದೂತನು
ದಂಡಿಳಿಸಿ ಕಾವಲಾಗಿದ್ದು
ಕಾಪಾಡುವಾತನೇ ಸ್ತೋತ್ರ ಕೀರ್ತ 34:7

746. ನಿನ್ನಲ್ಲಿ ಭಯಭಕ್ತಿಯುಳ್ಳವರಿಗೆ
ಸಿಕ್ಕ ತಕ್ಕ ಬಾಧ್ಯತೆಯನ್ನು ನನಗೂ
ದಯಪಾಲಿಸುವಾತನೇ ಸ್ತೋತ್ರ ಕೀರ್ತ 61:5

747. ಮುರಿದ ಮನಸ್ಸುಳ್ಳವರಿಗೆ
ನೆರವಾಗುವಾತನೇ ಸ್ತೋತ್ರ ಕೀರ್ತ 34:18

748. ಕುಗ್ಗಿ ಹೋದವರನ್ನು ಉದ್ಧಾರ
ಮಾಡುವಾತನೇ ಸ್ತೋತ್ರ ಕೀರ್ತ 34:18

749. ನಮ್ಮ ಭೂಯಾತ್ರೆಯ ಕಾರ್ಯ
ವನ್ನು ಸಾಗಿಸುವಾತನೇ ಸ್ತೋತ್ರ ಕೀರ್ತ 37:5

750. ಸರ್ವಾಧಿಕಾರವು ದೇವರದೇ
ಆಗಿರುವುದಕ್ಕಾಗಿ ಸ್ತೋತ್ರ ಕೀರ್ತ 62:1

751. ಪ್ರಾರ್ಥನೆಯನ್ನು ಕೇಳುವಾತನೇ ಸ್ತೋತ್ರ ಕೀರ್ತ 65:

52. ನರರೆಲ್ಲರ ಪ್ರಾರ್ಥನೆಯನ್ನು
ಕೇಳುವಾತನೇ ಸ್ತೋತ್ರ ಕೀರ್ತ 65:

753. ಎಲ್ಲರೂ ಅಡ್ಡಬಿದ್ದು, ಎಲ್ಲರೂ
ನಿನ್ನನ್ನು ದೇವರೆಂದು ಪ್ರತಿಜ್ಞೆ
ಮಾಡುವರು ಅದಕ್ಕಾಗಿ ಸ್ತೋತ್ರ ರೋಮಾ 14:1

754. ನಿನ್ನ ಕಾರ್ಯಫಲದಿಂದ
ಭೂಮಿಯು ತೃಪ್ತಿ ಹೊಂದುತ್ತದೆ
ಅದಕ್ಕಾಗಿ ಸ್ತೋತ್ರ ಕೀರ್ತ 104:1

755. ಭೂಲೋಕವನ್ನು ನಿನ್ನ ಆಸ್ತಿಯಿಂದ
ತುಂಬಿಸಿರುತ್ತಿ ಅದಕ್ಕಾಗಿ ಸ್ತೋತ್ರ ಕೀರ್ತ 104:2

756. ಭೂಮಿಯನ್ನು ನೂತನ
ಪಡಿಸಿರುತ್ತಿ ಅದಕ್ಕಾಗಿ ಸ್ತೋತ್ರ ಕೀರ್ತ 104:3

757. ಭೂಮಿಯನ್ನು ಸಿದ್ಧಮಾಡಿ
ಮನುಷ್ಯರಿಗೆ ಧಾನ್ಯವನ್ನು
ಒದಗಿಸುತ್ತಿರುವಾತನೇ ಸ್ತೋತ್ರ ಕೀರ್ತ 65:

758. ನಮ್ಮ ದೇಶವನ್ನು ಕಟಾಕ್ಷಿಸಿ
ಅದರ ಮೇಲೆ ಮಳೆ ಸುರಿಸಿ
ಹದಗೊಳಿಸುವಾತನೇ ಸ್ತೋತ್ರ ಕೀರ್ತ 65:

759. ಭೂಮಿಯ ಬೆಳೆಯನ್ನು ವೃದ್ಧಿ
ಪಡಿಸುವಾತನೇ ಸ್ತೋತ್ರ ಕೀರ್ತ 65:10

760. ಭೂಮಿಯನ್ನೆಲ್ಲಾ ನಿನ್ನ ಕೃಪೆಯಿಂದ
ತುಂಬಿಸುವಾತನೇ ಸ್ತೋತ್ರ ಕೀರ್ತ 33:5

761. ಪರಾತ್ಪರನ ಭುಜಬಲದಿಂದ ಪ್ರಕಟ
ವಾದ ವರುಷಗಳನ್ನು ಜ್ಞಾಪಿಸಿ
ಕೊಂಡು ಸ್ತುತಿಸುವೆನು ಸ್ತೋತ್ರ ಕೀರ್ತ 77:10

762. ನೀನು ಹಾದು ಹೋಗುವ ಮಾರ್ಗ
ದಲ್ಲೆಲ್ಲಾ ಕೃಪೆಯಿಂದ ಸಂವತ್ಸರಕ್ಕೆ
ಕಿರೀಟವನ್ನು ಇಟ್ಟಿರುವಾತನೇ ಸ್ತೋತ್ರ ಕೀರ್ತ 65:11

763. ಹಾದು ಹೋಗುವ ಮಾರ್ಗದಲ್ಲೆಲ್ಲಾ
ಸಮೃದ್ಧಿಕರವಾದ ವೃಷ್ಟಿಯನ್ನು
ಸುರಿಸುವಾತನೇ ಸ್ತೋತ್ರ ಕೀರ್ತ 65:11

764. ನಿನ್ನ ಬಳಿಯಲ್ಲಿ ಜೀವ ಬುಗ್ಗೆ
ಉಂಟಲ್ಲಾ ಅದಕ್ಕಾಗಿ ಸ್ತೋತ್ರ ಕೀರ್ತ 36:9

765. ನಿನ್ನ ನ್ಯಾಯವು ಮಹಾಸಾಗರದಂತೆ
ಇರುವುದಕ್ಕಾಗಿ ಸ್ತೋತ್ರ ಕೀರ್ತ 36:6

766. ನಿನ್ನ ಆಲೋಚನೆಗಳು ಅಶೋಧ್ಯ
ವಾಗಿದೆ ಅದಕ್ಕಾಗಿ ಸ್ತೋತ್ರ ಕೀರ್ತ 92:5

767. ಅಪಾರವಾದ ನಿನ್ನ ಮಹತ್ವಕ್ಕಾಗಿ ಸ್ತೋತ್ರ ಕೀರ್ತ 145:3

768. ನಾವು ನಮ್ಮ ನಿವಾಸಗಳಲ್ಲಿ ವಾಸಿಸುವಂತೆ ಮಾಡುವಾತನೇ ಸ್ತೋತ್ರ ಹೋಶೆ 11:11

769. ಶ್ರೇಷ್ಠವಾದ ನಿನ್ನ ಕೃತ್ಯಗಳಿಗಾಗಿ ಸ್ತೋತ್ರ ಕೀರ್ತ 92:5

770. ಭೂಮ್ಯಾಕಾಶದಲ್ಲಿ ಮೆರೆಯುತ್ತಿರುವ ನಿನ್ನ ಪ್ರಭಾವಕ್ಕಾಗಿ ಸ್ತೋತ್ರ ಕೀರ್ತ 148:13

771. ಆಕಾಶದಷ್ಟು ಉನ್ನತವಾದ ನಿನ್ನ ಪ್ರೀತಿಗಾಗಿ ಸ್ತೋತ್ರ ಕೀರ್ತ 36:5

772. ಮೇಘ ಮಾರ್ಗವನ್ನು ಮುಟ್ಟುವ ನಿನ್ನ ನಂಬಿಗಸ್ತಿಕೆಗಾಗಿ ಸ್ತೋತ್ರ ಕೀರ್ತ 36:5

773. ಮಾನವರು ಆಶ್ರಯಿಸಿಕೊಳ್ಳುವ ನಿನ್ನ ರೆಕ್ಕೆಗಳ ಮರೆಗಾಗಿ ಸ್ತೋತ್ರ ಕೀರ್ತ 36:7

774. ಸಹಸ್ರಾರು ಲಕ್ಷಾಂತರ ರಥಗಳುಳ್ಳಾತನೇ ಸ್ತೋತ್ರ ಕೀರ್ತ 68:17

775. ಮೋಡಗಳನ್ನು ವಾಹನವನ್ನಾಗಿ ಮಾಡಿಕೊಂಡು ವಾಯುವಿನ ರೆಕ್ಕೆಗಳ ಮೇಲೆ ಸಂಚರಿಸುವಾತನೇ ಸ್ತೋತ್ರ ಕೀರ್ತ 104:3

776. ಆಕಾಶವನ್ನು ಗುಡಾರದಂತೆ ಎತ್ತಿ ಹರಡಿದಾತನೇ ಸ್ತೋತ್ರ ಕೀರ್ತ 104:2

777. ನಕ್ಷತ್ರಗಳ ಸಂಖ್ಯೆಗಳನ್ನು ಗೊತ್ತು ಮಾಡಿ ಪ್ರತಿಯೊಂದಕ್ಕೆ ಹೆಸರಿಟ್ಟಿರುವಾತನೇ ಸ್ತೋತ್ರ — ಕೀರ್ತ 147:4

778. ಅಪರಿಮಿತವಾದ ನಿನ್ನ ಜ್ಞಾನಕ್ಕಾಗಿ ಸ್ತೋತ್ರ — ಕೀರ್ತ 147:5

779. ಅಪಾರವಾದ ನಿನ್ನ ಸೌಖ್ಯಕ್ಕಾಗಿ ಸ್ತೋತ್ರ — ಜೆಕ 9:17

780. ನಿನ್ನ ಸೌಂದರ್ಯವು ದೊಡ್ಡದು ಕರ್ತನೇ ಅದಕ್ಕಾಗಿ ಸ್ತೋತ್ರ — ಜೆಕ 9:17

781. ಕೃಪಾಪೂರ್ಣನಾದ ಕರ್ತನೇ ಸ್ತೋತ್ರ — 1 ಪೂ.ವೃ 21:13

782. ನಿನ್ನ ಕೃಪೆಯು ದೊಡ್ಡದು ಕರ್ತನೇ ಸ್ತೋತ್ರ — ಕೀರ್ತ 86:13

783. ಹಗಲಲ್ಲಿ ನಿನ್ನ ಪ್ರೀತಿಯನ್ನು ನನಗೆ ಅನುಗ್ರಹಿಸುವ ಕರ್ತನೇ ಸ್ತೋತ್ರ — ಕೀರ್ತ 42:8

784. ಜೀವಕ್ಕಿಂತಲೂ ಅಪಾರವಾದ ನಿನ್ನ ಪ್ರೇಮಾನುಭವಕ್ಕಾಗಿ ಸ್ತೋತ್ರ — ಕೀರ್ತ 63:3

785. ಕೃಪೆಯನ್ನು ಘನವನ್ನು ಅನುಗ್ರಹಿಸುವ ಕರ್ತನೇ ಸ್ತೋತ್ರ — ಕೀರ್ತ 84:11

786. ದೇವರೇ ನಿನ್ನ ಪ್ರೀತಿ ಎಷ್ಟೋ ಅಮೂಲ್ಯವಾದದ್ದು ಅದಕ್ಕಾಗಿ ಸ್ತೋತ್ರ ಕೀರ್ತ 36:7

787. ಶಾಶ್ವತವಾಗಿರುವ ನಿನ್ನ ಕೃಪೆಗಾಗಿ ಸ್ತೋತ್ರ ಕೀರ್ತ 106:1

788. ನಮ್ಮನ್ನು ಉಳಿಸಿರುವ ಕರ್ತನ ಕರುಣೆಗಾಗಿ ಸ್ತೋತ್ರ ಪ್ರಲಾ 3:22

789. ದಿನದಿನವೂ ಹೊಸ ಹೊಸದಾಗಿ ಒದಗುವ ನಿನ್ನ ಕೃಪೆಗಾಗಿ ಸ್ತೋತ್ರ ಪ್ರಲಾ 3:23

790. ಪ್ರೀತಿ ಕೃಪೆಗಳೆಂಬ ಕಿರೀಟದಿಂದ ನನ್ನನ್ನು ಶೃಂಗರಿಸುವವನೇ ಸ್ತೋತ್ರ ಕೀರ್ತ 103:4

791. ನೀನು ಮಾಡಿದ ಉಪಕಾರಗಳಿಗೆ ಸ್ತೋತ್ರ ಕೀರ್ತ 103:2

792. ಮಹಿಮಾ ಪ್ರಭಾವಗಳಿಂದ ಭೂಷಿತ ನಾಗಿರುವ ಕರ್ತನೇ ಸ್ತೋತ್ರ ಕೀರ್ತ 104:1

793. ರಾಜ್ಯಾಧಿಕಾರವನ್ನೂ ಮಹಿಮೆ ವಸ್ತ್ರ ವನ್ನೂ ಧರಿಸಿರುವ ಕರ್ತನೇ ಸ್ತೋತ್ರ ಕೀರ್ತ 93:1

794. ಬೆಳಕನ್ನು ವಸ್ತ್ರದಂತೆ ಹೊದ್ದು ಕೊಂಡಿರುವಾತನೇ ಸ್ತೋತ್ರ ಕೀರ್ತ 104:2

795. ಗಾಳಿಯನ್ನು ದೂತರನ್ನಾಗಿ ಮಾಡಿಕೊಂಡಿರುವಾತನೇ ಸ್ತೋತ್ರ ಕೀರ್ತ 104:4

796. ನಿನ್ನ ಕೃಪೆಗೋಸ್ಕರವೂ ನೀನು ಮಾನವರಿಗಾಗಿ ನಡಿಸಿದ ಅದ್ಭುತ ಕಾರ್ಯಕ್ಕಾಗಿ ಸ್ತೋತ್ರ — ಕೀರ್ತ 107:8

797. ಬಾಯಾರಿದವರ ಆಶೆಯನ್ನು ಪೂರೈಸಿದಾತನೇ ಸ್ತೋತ್ರ — ಕೀರ್ತ 107:8

798. ವಾಕ್ಯವನ್ನು ಕಳುಹಿಸಿ ಅವರನ್ನು ಗುಣಪಡಿಸಿದಾತನೇ ಸ್ತೋತ್ರ — ಕೀರ್ತ 107:20

799. ನಿನ್ನ ಧರ್ಮಶಾಸ್ತ್ರದ ಅದ್ಭುತಗಳನ್ನು ಕಂಡುಕೊಳ್ಳುವಂತೆ ಮಾಡಿದಾತನೇ ಸ್ತೋತ್ರ — ಕೀರ್ತ 119:18

800. ಅನಾಥರನ್ನು ಕರುಣಿಸುವ ದೇವರೇ ಸ್ತೋತ್ರ — ಹೋಶೆ 14:13

801. ನಿನ್ನ ವಾಕ್ಯವನ್ನು ನಂಬುವಂತೆ ನಿರೀಕ್ಷೆ ಹುಟ್ಟಿಸಿದಾತನೇ ಸ್ತೋತ್ರ — ಕೀರ್ತ 119:49

802. ನಿನ್ನ ನುಡಿಯು ನನ್ನನ್ನು ಚೈತನ್ಯಗೊಳಿಸುವಂತೆ ಮಾಡಿದಾತನೇ ಸ್ತೋತ್ರ — ಕೀರ್ತ 119:50

803. ನಿನ್ನ ವಾಗ್ದಾನಕ್ಕೆ ತಕ್ಕಂತೆ ನಿನ್ನ ಸೇವಕನಿಗೆ ಮಹೋಪಕಾರಿಯಾಗಿದ್ದೀ ಸ್ತೋತ್ರ — ಕೀರ್ತ 119:65

804. ನಿನ್ನ ವಾಕ್ಯವು ನನ್ನ ಕಾಲಿಗೆ
ದೀಪವೂ ನನ್ನ ದಾರಿಗೆ ಬೆಳಕೂ
ಆಗಿರುವುದಕ್ಕಾಗಿ ಸ್ತೋತ್ರ ಕೀರ್ತ 119:105

805. ನಿನ್ನ ವಾಕ್ಯ ವಿವರಣೆಯಿಂದ
ಯುಕ್ತಿಹೀನರಿಗೆ ಜ್ಞಾನೋದಯ
ವಾಗುವುದಕ್ಕೋಸ್ಕರ ಸ್ತೋತ್ರ ಕೀರ್ತ 119:130

806. ನಿನ್ನ ನುಡಿಯು ಪರಿಶುದ್ಧ
ವಾಗಿರುವದಕ್ಕೆ ಸ್ತೋತ್ರ ಕೀರ್ತ 119:140

807. ನಿನ್ನ ವಾಕ್ಯಗಳು ನನಗೆ ಹರ್ಷವೂ
ನನ್ನ ಹೃದಯಾನಂದವೂ
ಆಗಿರುವದಕ್ಕಾಗಿ ಸ್ತೋತ್ರ ಯೆರೆ 15:16

808. ನಿನ್ನ ವಾಕ್ಯವು ಯಥಾರ್ಥವಾಗಿ
ರುವುದಕ್ಕೆ ಸ್ತೋತ್ರ ಕೀರ್ತ 33:4

809. ನಿನ್ನ ಕೃತ್ಯಗಳೆಲ್ಲಾ ನಂಬಿಕೆಯಾಗಿ
ರುವುದಕ್ಕಾಗಿ ಸ್ತೋತ್ರ ಕೀರ್ತ 33:4

810. ನೀನು ಭಯಂಕರವಾದ ಮಹತ್ಕಾರ್ಯ
ಗಳನ್ನು ಮಾಡುವುದಕ್ಕೆ ಸ್ತೋತ್ರ ಕೀರ್ತ 65:5

811. ನೀತಿಗನುಸಾರವಾಗಿ ನಮಗೆ
ಸದುತ್ತರವನ್ನು ದಯಪಾಲಿಸು
ವವನಾಗಿರುವದಕ್ಕಾಗಿ ಸ್ತೋತ್ರ ಕೀರ್ತ 65:5

812. ನಿನ್ನ ಕೋಪವು ಕ್ಷಣಮಾತ್ರವೇ ಸ್ತೋತ್ರ ಕೀರ್ತ 30:5

813. ನಿನ್ನ ಅನುಗ್ರಹವು ಜೀವಮಾನವೆಲ್ಲಾ
ಇರುವುದು ಅದಕ್ಕಾಗಿ ಸ್ತೋತ್ರ ಕೀರ್ತ 30:5

814. ನಿತ್ಯವೂ ಕೋಪದಿಂದಿರುವವನಲ್ಲ
ಅದಕ್ಕಾಗಿ ಸ್ತೋತ್ರ ಕೀರ್ತ 103:9

815. ನೀನು ಯಾವಾಗಲೂ ತಪ್ಪು
ಹುಡುಕುವವನಲ್ಲ ಅದಕ್ಕಾಗಿ ಸ್ತೋತ್ರ ಕೀರ್ತ 103:9

816. ಐಗುಪ್ತ್ಯರ ಚೊಚ್ಚಲಾದವುಗಳನ್ನು
ಸಂಹರಿಸಿದ ದೇವರಿಗೆ ಕೊಂಡಾಟ
ವಾಗಲಿ ಸ್ತೋತ್ರ ಕೀರ್ತ 136:10

817. ಸಮುದ್ರವನ್ನು ಒಣಗಿಸಿ ಒಣ ನೆಲ
ವನ್ನಾಗಿ ಮಾರ್ಪಸಿದಾತನೇ ಸ್ತೋತ್ರ ಕೀರ್ತ 136:13

818. ಸಮುದ್ರವನ್ನು ಛೇಧಿಸಿ ಜಲರಾಶಿಗಳ
ಮೇಲೆ ತಿಮಿಂಗಿಲಗಳ ತಲೆಯನ್ನು
ಜಜ್ಜಿಬಿಟ್ಟಾತನೇ ಸ್ತೋತ್ರ ಕೀರ್ತ 74:13

819. ಲಿವ್ಯಾತನ ಶಿರಖಂಡನ ಮಾಡಿ
ಅಡವಿಯ ಮೃಗಕ್ಕೆ ತಿನ್ನ
ಕೊಟ್ಟಾತನೇ ಸ್ತೋತ್ರ ಕೀರ್ತ 74:14

820. ಬುಗ್ಗೆ ಹಳ್ಳಗಳನ್ನು ಉಕ್ಕಿಸಿ
ದಾತನೇ ಸ್ತೋತ್ರ ಕೀರ್ತ 74:15

821. ಮಹಾ ನದಿಗಳನ್ನು ಒಣಗಿಸಿ
ಬಿಟ್ಟಾತನೇ ಸ್ತೋತ್ರ — ಕೀರ್ತ 74:15

822. ಕಡಲನ್ನೇ ಸೀಳಿ ದಾರಿ
ಮಾಡಿದಾತನೇ ಸ್ತೋತ್ರ — ವಿಮೋ 14:17

823. ಹಗಲು ಮೋಡಗಳಿಂದಲೂ
ಇರುಳು ಬೆಂಕಿಯ ಬೆಳಕಿನಿಂದಲೂ
ಅವರನ್ನು ಕರೆದೊಯ್ದಾತನೇ ಸ್ತೋತ್ರ — ಕೀರ್ತ 78:14

824. ಮರುಳು ಕಾಡಿನ ಬಂಡೆಯನ್ನು
ಸೀಳಿ ಬುಗ್ಗೆಯಿಂದ ನೀರನ್ನು ಚಿಮ್ಮು
ವಂತೆ ಮಾಡಿ ಅವರಿಗೆ ನೀರನ್ನು
ದಯಪಾಲಿಸಿದಾತನೇ ಸ್ತೋತ್ರ — ಕೀರ್ತ 78:15

825. 'ಮಾರಾ' ಎಂಬಲ್ಲಿನ ನೀರನ್ನು
'ಮಧುರ' ಮಾಡಿದಾತನೇ ಸ್ತೋತ್ರ — ವಿಮೋ 15:25

826. ದೇವದೂತರ ಆಹಾರ 'ಮನ್ನ'
ವನ್ನು ಕೊಟ್ಟಾತನೇ ಸ್ತೋತ್ರ — ಕೀರ್ತ 78:25

827. ಫರೋಹನ ಸೈನ್ಯವನ್ನು ಕೆಂಪು
ಸಮುದ್ರದಲ್ಲಿ ಕೆಡವಿಬಿಟ್ಟಾತನೇ
ಸ್ತೋತ್ರ — ಕೀರ್ತ 136:15

828. ಯೆರಿಕೋ ಪಟ್ಟಣದ ಕೋಟೆಯ
ಗೋಡೆಯನ್ನು ಕೆಡವಿ ಬಿಟ್ಟಾತನೇ
ಸ್ತೋತ್ರ — ಯೆಹೋ 6:20

829. ದೊಡ್ಡ ಅರಸನನ್ನು ಹೊಡೆದು
ಹಾಕಿದಾತನೇ ಸ್ತೋತ್ರ ಕೀರ್ತ 136:17

830. ಕತ್ತೆಯ ಬಾಯನ್ನು ತೆರೆದಾತನೇ
ಸ್ತೋತ್ರ ಅರಣ್ಯ 22:28

831. ಸೂರ್ಯನನ್ನು ಗಿಬ್ಯೋನಿನಲ್ಲೂ
ಚಂದ್ರನನ್ನು ಅಯ್ಯಾಲೋನ್
ತಗ್ಗಿನಲ್ಲೂ ನಿಲ್ಲಿಸಿದಾತನೇ ಸ್ತೋತ್ರ ಅರಣ್ಯ 10:12

832. ನಿವಾಸಿಗಳ ದುಷ್ಟತನಕ್ಕಾಗಿ ನದಿ
ಗಳನ್ನು ಅರಣ್ಯವಾಗುವಂತೆ
ಮಾಡಿದಾತನೇ ಸ್ತೋತ್ರ ಕೀರ್ತ 107:33

833. ಬುಗ್ಗೆಗಳನ್ನು ಒಣನೆಲವನ್ನಾಗಿಯೂ
ಮಾಡುವಾತನೇ ಸ್ತೋತ್ರ ಕೀರ್ತ 107:34

834. ಫಲಭೂಮಿಯನ್ನು ಉಪ್ಪು ನೆಲವಾಗು
ವಂತೆ ಮಾಡಿದಾತನೇ ಸ್ತೋತ್ರ ಕೀರ್ತ 107:34

835. ಅರಣ್ಯವನ್ನು ಕೆರೆಯನ್ನಾಗಿಯೂ
ಒಣನೆಲವನ್ನು ಬುಗ್ಗೆಯನ್ನಾಗಿಯೂ
ಮಾಡಿದಾತನೇ ಸ್ತೋತ್ರ ಕೀರ್ತ 107:35

836. ಬಂಡೆಯನ್ನು ಕೆರೆಯನ್ನಾಗಿ
ಮಾಡಿದಾತನೇ ಸ್ತೋತ್ರ ಕೀರ್ತ 114:8

837. ಶಿಲೆಯನ್ನು ಬುಗ್ಗೆಯನ್ನಾಗಿ
ಮಾರ್ಪಡಿಸಿದಾತನೇ ಸ್ತೋತ್ರ ಕೀರ್ತ 114:8

838. ಹಸಿದವರ ನಿವಾಸವನ್ನು ನೆಲೆ ಗೊಳಿಸಿ ಪಟ್ಟಣವನ್ನು ಕಟ್ಟುವಂತೆ ಮಾಡಿದಾತನೇ ಸ್ತೋತ್ರ — ಕೀರ್ತ 107:35

839. ಬಂಜೆಯು ಮಕ್ಕಳೊಂದಿಗೆ ಸಂತೋಷದಿಂದ ವಾಸಿಸುವಂತೆ ಮಾಡುವಾತನೇ ಸ್ತೋತ್ರ — ಕೀರ್ತ 139:9

840. ಬಿದ್ದು ಹೋದದನ್ನು ಕಟ್ಟುವಾತನೇ ಸ್ತೋತ್ರ — ಯೆಹೆ 36:36

841. ಹಾಳಾದದ್ದನ್ನು ಬೆಳೆಯಿಸುವಾತನೇ ಸ್ತೋತ್ರ — ಯೆಹೆ 36:36

842. ತಪ್ಪಿಸಿಕೊಂಡದ್ದನ್ನು ಹುಡುಕುವಾತನೇ ಸ್ತೋತ್ರ — ಯೆಹೆ 34:16

843. ದುರ್ಬಲವಾದದ್ದನ್ನು ಬಲಗೊಳಿಸುವಾತನೇ ಸ್ತೋತ್ರ — ಯೆಹೆ 34:16

844. ಓಡಿಸಿದ್ದನ್ನು ಮಂದೆಗೆ ಸೇರಿಸುವಾತನೇ ಸ್ತೋತ್ರ — ಯೆಹೆ 34:16

845. ಮುರಿದ ಅಂಗವನ್ನು ಕಟ್ಟುವಾತನೇ ಸ್ತೋತ್ರ — ಯೆಹೆ 34:16

846. ಗಾಳಿಯಲ್ಲಿ ಮರೆಯಂತೆಯೂ ಇರುವಾತನೇ ಸ್ತೋತ್ರ — ಯೆಶಾ 32:2

847. ನೀರಿನ ಕಾಲುವೆಗಳ ಪ್ರಕಾರ ಇರುವಾತನೇ ಸ್ತೋತ್ರ — ಯೆಶಾ 32:2

848. ಅತಿವೃಷ್ಟಿಯಲ್ಲಿ ಆವರಣದ ಹಾಗೆ ಇರುವಾತನೇ ಸ್ತೋತ್ರ — ಯೆಶಾ 32:2

849. ಕುರುಡರಿಗೆ ಕಣ್ಣು ಕೊಡುವಾತನೇ ಸ್ತೋತ್ರ — ಕೀರ್ತ 146:8

850. ಬೆಂಗಾಡಿನಲ್ಲಿ ದೊಡ್ಡ ಬಂಡೆಯ ನೆರಳಿ ನೋಪಾದಿಯಲ್ಲಿರುವಾತನೇ ಸ್ತೋತ್ರ — ಯೆಶಾ 32:2

851. ಸೋತವನಿಗೆ ತ್ರಾಣವನ್ನು ಕೊಡುವಾತನೇ ಸ್ತೋತ್ರ — ಯೆಶಾ 40:29

852. ನಿರ್ಬಲನಿಗೆ ಬಹು ಬಲವನ್ನು ದಯಪಾಲಿಸುವಾತನೇ ಸ್ತೋತ್ರ — ಯೆಶಾ 40:29

853. ಬತ್ತಿದ ಭೂಮಿಯಲ್ಲಿ ಮಳೆಗರೆದು ದಾಹವುಳ್ಳವನ ಮೇಲೆ ತಣ್ಣೀರನ್ನು ಹೊಯ್ಯುವಾತನೇ ಸ್ತೋತ್ರ — ಯೆಶಾ 44:3

854. ಒಣ ನೆಲದಲ್ಲಿ ಕಾಲುವೆಗಳನ್ನು ಹರಿಸುವಾತನೇ ಸ್ತೋತ್ರ — ಯೆಶಾ 44:3

855. ಎಲ್ಲರನ್ನು ಕರುಣಿಸುವಾತನೇ ಸ್ತೋತ್ರ — ಕೀರ್ತ 145:9

856. ಎಲ್ಲಾ ಜೀವಿಗಳಿಗೆ ಆಹಾರವನ್ನು ತಕ್ಕ ಸಮಯದಲ್ಲಿ ಕೊಡುವಾತನೇ ಸ್ತೋತ್ರ — ಕೀರ್ತ 145:15

857. ಬಿತ್ತುವವನಿಗೆ ಬೀಜವನ್ನೂ
ಉಣ್ಣುವವನಿಗೆ ಆಹಾರವನ್ನು
ಕೊಡುವಾತನೇ ಸ್ತೋತ್ರ 2 ಕೊರಿ 9:10

858. ಹಸಿದವನಿಗೆ ಆಹಾರವನ್ನು
ಕೊಡುವಾತನೇ ಸ್ತೋತ್ರ ಕೀರ್ತ 146:7

859. ತನ್ನಲ್ಲಿ ಭಯಭಕ್ತಿಯುಳ್ಳವರಿಗೆ
ಆಹಾರವನ್ನು ಕೊಡುವಾತನೇ ಸ್ತೋತ್ರ ಕೀರ್ತ 111:5

860. ತನ್ನಲ್ಲಿ ಭಯಭಕ್ತಿಯುಳ್ಳವರಿಗೆ ಇಷ್ಟ
ವನ್ನು ನೆರವೇರಿಸುವಾತನೇ ಸ್ತೋತ್ರ ಕೀರ್ತ 145:19

861. ತನ್ನ ಪ್ರಿಯರಿಗೆ ನಿದ್ರೆಯಲ್ಲಿಯೂ
ಆಹಾರ ಕೊಡುವಾತನೇ ಸ್ತೋತ್ರ ಕೀರ್ತ 127:2

862. ತನ್ನನ್ನು ಪ್ರೀತಿಸುವವರೆಲ್ಲರನ್ನೂ
ಕಾಪಾಡುವಾತನೇ ಸ್ತೋತ್ರ ಕೀರ್ತ 145:20

863. ಸಾಧು ಜನರನ್ನು ಕಾಪಾಡು
ವಾತನೇ ಸ್ತೋತ್ರ ಕೀರ್ತ 116:6

864. ಯಥಾರ್ಥವಾಗಿ ಮೊರೆಯಿಡುವವ
ರಿಗೆ ಹತ್ತಿರವಾಗಿರುವಾತನೇ ಸ್ತೋತ್ರ ಕೀರ್ತ 145:18

865. ನೀತಿಯುಳ್ಳ ನಿನ್ನ ಮಾರ್ಗಗಳಿಗಾಗಿ
ಸ್ತೋತ್ರ ಕೀರ್ತ 145:17

866. ಎಲ್ಲಾ ಕಾರ್ಯಗಳಲ್ಲಿ ಕೃಪೆ
ತೋರಿಸುವಾತನೇ ಸ್ತೋತ್ರ ಕೀರ್ತ 145:17

867. ನಮ್ಮ ಹೆಸರನ್ನು ಹಿಡಿದು
ಕರೆಯುವ ಇಸ್ರಾಯೇಲ್ಯರ
ದೇವರೇ ನಿನಗೆ ಸ್ತೋತ್ರ ಯೆಶಾ 45:2

868. ಕಬ್ಬಿಣದ ಅಗುಳಿಗಳನ್ನು ಮುರಿದು
ಬಿಡುವಾತನೇ ಸ್ತೋತ್ರ ಯೆಶಾ 45:2

869. ಆಸ್ತಿ ಪಾಸ್ತಿಗಳನ್ನು ಗುಪ್ತ ಸ್ಥಳಗಳಲ್ಲಿ
ಮರೆ ಮಾಡಿದ ನಿಧಿ ನಿಕ್ಷೇಪಗಳನ್ನು
ಕೊಡುವಾತನೇ ಸ್ತೋತ್ರ ಯೆಶಾ 45:3

870. ಯೆರೂಸಲೇಮನ್ನು ಕಟ್ಟಿ ಚದುರಿ
ಹೋಗಿದ್ದ ಇಸ್ರಾಯೇಲ್ಯರನ್ನು
ಕೂಡಿಸಿದಾತನೇ ಸ್ತೋತ್ರ ಕೀರ್ತ 147:2

871. ಹೆಣ್ಣು ಹಕ್ಕಿಗಳು ಹಾರಾಡುತ್ತಾ
ತನ್ನ ಮರಿಗಳನ್ನು ಕಾಪಾಡುವಂತೆ
ಯೆರೂಸಲೇಮನ್ನು (ನಮ್ಮನ್ನು)
ಕಾಪಾಡುವ ಸೇನಾಧೀಶ್ವರನಾದ
ಕರ್ತನೆ ಸ್ತೋತ್ರ ಯೆಶಾ 31:5

872. ಪರ್ವತಗಳು ಯೆರೂಸಲೇಮಿನ
ಸುತ್ತಲೂ ಹೇಗೋ ಹಾಗೆಯೇ ಇಂದಿ
ನಿಂದ ಸದಾಕಾಲವೂ ತನ್ನ ಜನರ
ಸುತ್ತಲೂ ಇರುವಾತನೇ ಸ್ತೋತ್ರ ಕೀರ್ತ 125:2

873. ಯೆರೂಸಲೇಮನ್ನು ಕಟ್ಟುವಾತನೇ ಸ್ತೋತ್ರ ಕೀರ್ತ 147:

874. ಮನೆ ಕಟ್ಟುವ ಕರ್ತನೇ ಸ್ತೋತ್ರ ಕೀರ್ತ 127:

875. ಪಟ್ಟಣವನ್ನು ಕಾಯುವ ಕರ್ತನೆ ಸ್ತೋತ್ರ ಕೀರ್ತ 127:

876. ಹಳ್ಳಗಳನ್ನೋ ಎಂಬಂತೆ ಸೆರೆಯಲ್ಲಿ ಉಳಿದಿರುವ ನಮ್ಮನ್ನು ತಿರುಗಿ ಬರಮಾಡುವಾತನೇ ಸ್ತೋತ್ರ ಕೀರ್ತ 126:

877. ದುಷ್ಟರು ಹಾಕಿದ ಬಂಧನಗಳನ್ನು ಭೇಧಿಸಿ ಬಿಟ್ಟವನೇ ಸ್ತೋತ್ರ ಕೀರ್ತ 129:

878. ದುಷ್ಟರ ಮಾರ್ಗವನ್ನು ಡೊಂಕು ಮಾಡಿಬಿಡುವಾತನೇ ಸ್ತೋತ್ರ ಕೀರ್ತ 146:

879. ದುಷ್ಟರನ್ನು ನೆಲಕ್ಕೆ ಹತ್ತಿಸಿ ಬಿಡುವಾತನೇ ಸ್ತೋತ್ರ ಕೀರ್ತ 147:6

880. ನೀನು ಅವರನ್ನು ಅಪಾಯಕರ ಸ್ಥಳದಲ್ಲಿಟ್ಟು ಬೀಳಿಸಿ ನಾಶ ಮಾಡುವಾತನೇ ಸ್ತೋತ್ರ ಕೀರ್ತ 73:18

881 ಪಾಪಿಗಳಲ್ಲಿ ಸೇರದೆ ಪ್ರತ್ಯೇಕವಾಗಿರುವಾತನೇ ಸ್ತೋತ್ರ ಇಬ್ರಿ 7:26

882. ಕೇಡಿನ ವಿಷಯದಲ್ಲಿ ಪಶ್ಚಾತ್ತಾಪ
ಪಡುವಾತನೇ ಸ್ತೋತ್ರ 2 ಸಮು 24:16

883. ಮಹಾ ಕೃಪೆಯಿಂದ ಕ್ಷಮಿಸು
ವಾತನೇ ಸ್ತೋತ್ರ ಯೆಶಾ 55:7

884. ಜಜ್ಜಿ ಹೋದ ದೀನ ಮನದೊಂದಿಗೆ
ಇದ್ದುಕೊಂಡು ಜಜ್ಜಿ ಹೋದ ಆತ್ಮವನ್ನು
ಉಜ್ಜೀವಿಸ ಮಾಡುವಾತನೇ ಸ್ತೋತ್ರ ಯೆಶಾ 57:15

885. ಉನ್ನತ ಲೋಕವೆಂಬ ಪವಿತ್ರಾಲಯ
ದಲ್ಲಿ ವಾಸಿಸುವಾತನೇ ಸ್ತೋತ್ರ ಯೆಶಾ 57:15

886. ಒಬ್ಬನನ್ನು ತೆಗೆದು ಇನ್ನೊಬ್ಬನನ್ನು
ಸ್ಥಾಪಿಸುವಾತನೇ ಸ್ತೋತ್ರ ಕೀರ್ತ 75:7

887. ಅಹಂಕಾರಿಗಳನ್ನು ಎದುರಿಸುವ
ದೇವರೇ ಸ್ತೋತ್ರ 1 ಪೇತ್ರ 5:5

888. ದೀನರಿಗೆ ಕೃಪೆಯನ್ನು ತೋರಿಸು
ವಾತನೇ ಸ್ತೋತ್ರ 1 ಪೇತ್ರ 5:5

889. ರಾಜರನ್ನು ತಳ್ಳಿಹಾಕಿ ರಾಜರನ್ನು
ಎಬ್ಬಿಸುವಾತನೇ ಸ್ತೋತ್ರ ದಾನಿ 2:21

890. ಕಾಲ ಸಮಯವನ್ನು ಮಾರ್ಪಡಿಸು
ವಾತನೇ ಸ್ತೋತ್ರ ದಾನಿ 2:21

891. ಜ್ಞಾನಿಗಳಿಗೆ ಜ್ಞಾನವನ್ನು
ಕೊಡುವಾತನೇ ಸ್ತೋತ್ರ ದಾನಿ 2:2

892. ವಿವೇಕಿಗಳಿಗೆ ವಿವೇಕವನ್ನು
ಕೊಡುವಾತನೇ ಸ್ತೋತ್ರ ದಾನಿ 2:2

893. ಮನುಷ್ಯರಿಗೆ ಬುದ್ಧಿ
ಕಲಿಸುವಾತನೇ ಸ್ತೋತ್ರ ದಾನಿ 2:2

894. ಮನುಷ್ಯರ ಭಯಭಕ್ತಿಗೆ ಪಾತ್ರನೇ,
ಪಾಪವನ್ನು ಕ್ಷಮಿಸುವಾತನೇ ಸ್ತೋತ್ರ ಕೀರ್ತ 130:4

895. ಕೃಪಾಸಂಪನ್ನನಾಗಿ ಪೂರ್ಣ
ವಿಮೋಚನೆ ಕೊಡುವಾತನೇ ಸ್ತೋತ್ರ ಕೀರ್ತ 130:7

896. ನಿಜವಾಗಿಯೂ ಜನರನ್ನು ಸ್ನೇಹಿಸಿ
ಪ್ರೀತಿಸುವಾತನೇ ಸ್ತೋತ್ರ ಧರ್ಮೋ 33:3

897. ಜನಾಂಗಗಳನ್ನು ಶಿಕ್ಷಿಸುವಾತನೇ ಸ್ತೋತ್ರ ಕೀರ್ತ 94:10

898. ಸಮುದ್ರದ ತರಂಗಗಳ ಘೋಷ
ವನ್ನು ತಡೆಯುವಾತನೇ ಸ್ತೋತ್ರ ಕೀರ್ತ 65:7

899. ಜನಾಂಗಗಳ ದೊಂಬಿಯನ್ನು
ಶಾಂತಪಡಿಸುವಾತನೇ ಸ್ತೋತ್ರ ಕೀರ್ತ 65:7

900. ಸಾವಿರಾರು ತಲೆಗಳವರೆಗೆ ದಯೆ
ತೋರಿಸುವಾತನೇ ಸ್ತೋತ್ರ ಯೆರೆ 32:18

901. ತಂದೆಗಳ ದೋಷಫಲವನ್ನು ಅವರ ತರುವಾಯ ಮಕ್ಕಳ ಮಡಿಲಿಗೆ ಹಾಕುವಾತನೇ ಸ್ತೋತ್ರ ಯೆರೆ 32:18

902. ಶೋಧಿಸಲ್ಪಟ್ಟು ಬಾಧೆಯನ್ನು ಅನುಭವಿಸಿರುವದರಿಂದ ಶೋಧಿಸಲ್ಪಡುವವರಿಗೆ ಸಹಾಯ ಮಾಡುವದಕ್ಕೆ ಶಕ್ತನಾಗಿರುವಾತನೇ ಸ್ತೋತ್ರ ಇಬ್ರಿ 2:18

903. ದೇವರ ಬಳಿಗೆ ಬರುವವರನ್ನು ಸಂಪೂರ್ಣವಾಗಿ ರಕ್ಷಿಸುವದಕ್ಕೆ ಶಕ್ತನಾದವನೇ ಸ್ತೋತ್ರ ಇಬ್ರಿ 7:25

904. ತನ್ನ ಪ್ರಭಾವದ ಸಮಕ್ಷಮದಲ್ಲಿ ನಮ್ಮನ್ನು ನಿರ್ದೋಷಿಗಳನ್ನಾಗಿ ನಿಲ್ಲುವಂತೆ ಮಾಡಿದಾತನೇ ಸ್ತೋತ್ರ ಯೂದ 1:24

905. ಮಹಿಮೆಯೊಡನೆ ನಿನ್ನ ಸನ್ನಿಧಾನದಲ್ಲಿ ನಮ್ಮನ್ನು ನಿರ್ದೋಷಿಗಳನ್ನಾಗಿ ನಿಲ್ಲುವಂತೆ ಮಾಡಿದಾತನೇ ಸ್ತೋತ್ರ ಯೂದ 1:24

906. ಜನ ಸಮೂಹದೊಡನೆ ಹರ್ಷಧ್ವನಿ ಮಾಡುತ್ತಾ ಸ್ತೋತ್ರ ಪದಗಳನ್ನು ಹಾಡುವಂತೆ ಮಾಡಿದಾತನೇ ಸ್ತೋತ್ರ ಕೀರ್ತ 42:4

907. ನನಗಾಗಿ ಕಾರ್ಯವನ್ನು ಸಿದ್ಧಿಗೆ ತರುವಾತನೇ ಸ್ತೋತ್ರ ಕೀರ್ತ 57:2

908. ನಿರಂತರವೂ ನಮ್ಮನ್ನು ನಡಿಸುವವ
ನಾಗಿರುವಾತನೇ ಸ್ತೋತ್ರ ಕೀರ್ತ 48:14

909. ನುಡಿದ ಮಾತ್ರದಿಂದ ಸಮಸ್ತವನ್ನೂ
ಉಂಟುಮಾಡಿ ಆಜ್ಞಾಪನೆಯಿಂದ
ಸಮಸ್ತವನ್ನು ಸ್ಥಾಪನೆ ಮಾಡಿ
ದಾತನೇ ಸ್ತೋತ್ರ ಕೀರ್ತ 33:9

## ಕರ್ತನೇ ನಿನ್ನ ಕಾರ್ಯಗಳು (ಕ್ರಿಯೆಗಳು) ಎಷ್ಟು ಅಪಾರವಾದವುಗಳು ಅವುಗಳನ್ನೆಲ್ಲಾ ನಿನ್ನ ಜ್ಞಾನದಿಂದ ಉಂಟು ಮಾಡಿದ್ದೀ ಸ್ತೋತ್ರ

910. ಭೂಮ್ಯಾಕಾಶಗಳನ್ನು ಉಂಟು
ಮಾಡಿದಾತನೇ ಸ್ತೋತ್ರ ಕೀರ್ತ 104:24

911. ಬೆಳಕನ್ನು ಉಂಟು ಮಾಡಿದಾತನೇ
ಸ್ತೋತ್ರ

912. ವಿಸ್ತಾರವಾದ ಆಕಾಶವನ್ನೂ ಸಮುದ್ರವನ್ನು
ಉಂಟು ಮಾಡಿದಾತನೇ ಸ್ತೋತ್ರ

913. ಹೂಗಳು, ಫಲಗಳು, ಕಾಯಿಪಲ್ಯ, ಗೆಡ್ಡೆ ಗೆಣಸು
ಇವುಗಳನ್ನು ಕೊಡುವ ಮರ ಗಿಡಗಳ ಸೃಷ್ಟಿಗೆ
ಮೂಲನಾದಾತನೇ ಸ್ತೋತ್ರ

914. ಸೂರ್ಯ, ಚಂದ್ರ, ನಕ್ಷತ್ರ ಇವುಗಳಿಗಾಗಿ ಸ್ತೋತ್ರ

915. ಸಮುದ್ರ ಜಲಚರ, ಪ್ರಾಣಿಗಳು, ಕಾಡು
ಪ್ರಾಣಿಗಳು ಮತ್ತು ಮೀನುಗಳಿಗಾಗಿ ಸ್ತೋತ್ರ

916. ಪಕ್ಷಿಗಳು ಸಾಧು ಪ್ರಾಣಿಗಳು, ಕಾಡು ಪ್ರಾಣಿಗಳು
ಹರಿದಾಡುವ ಕ್ರಿಮಿ ಕೀಟಗಳಿಗಾಗಿ ಸ್ತೋತ್ರ

917. ಮಣ್ಣಿನಿಂದ ಮನುಷ್ಯನನ್ನು ಉಂಟುಮಾಡಿ
ಜೀವ ಶ್ವಾಸವನ್ನು ಊದಿ ಬಾಳ ಸಂಗಾತಿ
ಯನ್ನುಂಟು ಮಾಡಿದಾತನೇ ಸ್ತೋತ್ರ

918. ನೀನು ಉಂಟು ಮಾಡಿದ ಕಾಲಗಳಿಗಾಗಿ,
ಇಬ್ಬನಿ, ಮೋಡ, ಬಿಸಿಲಿಗಾಗಿ, ಉಕ್ಕಿ
ಬರುವ ಬುಗ್ಗೆಗಳಿಗಾಗಿ ಸ್ತೋತ್ರ

919. ನದಿಗಳಿಗಾಗಿ, ಕಾಲುವೆ, ಕೆರೆ, ಕೊಳಗಳಿಗಾಗಿ,
ಮರುಭೂಮಿ, ಹಿಮ ಪ್ರದೇಶಕ್ಕಾಗಿ ಸ್ತೋತ್ರ

920. ಪರ್ವತ, ಹಳ್ಳ, ದಿಣ್ಣೆ, ತಗ್ಗು, ಮರುಭೂಮಿ,
ಹಿಮ ಪ್ರದೇಶಕ್ಕಾಗಿ ಸ್ತೋತ್ರ

921. ಕಾಡುಗಳಿಗಾಗಿ ಗುಹೆಗಳಿಗಾಗಿ ನೆಲದಲ್ಲಿನ ಖನಿಜ
ಸಂಪತ್ತುಗಳಿಗಾಗಿ, ಆಸ್ತಿ ಭಾರಕ್ಕಾಗಿ, ಎಣ್ಣೆ ಉಕ್ಕುವ
ಬುಗ್ಗೆಗಳಿಗಾಗಿ, ಜ್ವಾಲಾಮುಖಿಗಾಗಿ ಸ್ತೋತ್ರ

## ನಮ್ಮ ರಕ್ಷಕನಾಗಿರುವ ಯೇಸುವೇ ನಿನ್ನ ಅದ್ಭುತ ಕಾರ್ಯಗಳಿಗಾಗಿ ಸ್ತೋತ್ರ

922. ನೀರನ್ನು ದ್ರಾಕ್ಷಾರಸವನ್ನಾಗಿ
ಮಾಡಿದಾತನೇ ಸ್ತೋತ್ರ ಯೋಹಾ 2:9

923. ಕಿವುಡರಿಗೆ, ಹುಟ್ಟು ಕುರುಡರಿಗೆ,
ಕೇಳುವುದಕ್ಕೆ ಕಾಣುವುದಕ್ಕೆ,
ಮಾತಾಡುವುದಕ್ಕೆ ಅದ್ಭುತ ಕಾರ್ಯ
ವನ್ನು ಮಾಡಿದಾತನೇ ಸ್ತೋತ್ರ
ಮತ್ತಾ 12:13, 9:33, ಯೋಹಾ 9:7

924. ಹುಟ್ಟು ಕುಂಟರು, ಗೂನುಳ್ಳವರು,
ಕೈ ಬತ್ತಿದವರು ಇವರನ್ನು ಸ್ವಸ್ಥ
ಮಾಡಿದಾತನೇ ಸ್ತೋತ್ರ
ಲೂಕ 13:13, ಮತ್ತಾ 8:13

925. ನಿನ್ನ ನಂಬಿಕೆ ಬಹಳ
ನಿನ್ನ ಮನಸ್ಸಿನಂತೆ ಆಗಲಿ
ಎಂದು ಹೇಳಿದಾತನೇ ಸ್ತೋತ್ರ ಮತ್ತಾ 15:28

926. ಕುಷ್ಠ ರೋಗವನ್ನು ವಾಸಿ
ಮಾಡಿದಾತನೇ ಸ್ತೋತ್ರ ಲೂಕ 17:14

927. ಸತ್ತವರನ್ನು ಬದುಕಿಸಿದಾತನೇ ಸ್ತೋತ್ರ

ಲೂಕ 7:15, ಯೋಹಾ 11:44, ಮಾರ್ಕ 5:42

928. ಗಾಳಿಯನ್ನು ಸಮುದ್ರವನ್ನು ಗದರಿಸಿ ಬಿರುಗಾಳಿಯನ್ನು ಶಾಂತಪಡಿಸಿದಾತನೇ ಸ್ತೋತ್ರ ಮತ್ತಾ 8:26

929. ಸಮುದ್ರದ ಮೇಲೆ ನಡೆದು ಬಂದಾತನೇ ಸ್ತೋತ್ರ ಮತ್ತಾ 14:25

930. ನಿನ್ನ ಮಾತಿನಂತೆ ಬಲೆ ಹಾಕಲು ಆಳದಲ್ಲಿ ಹೆಚ್ಚು ಮೀನನ್ನು ಮತ್ತೊಮ್ಮೆ ಬಲಗಡೆ ಬಲೆ ಹಾಕಲು 153 ದೊಡ್ಡ ಮೀನುಗಳನ್ನೂ ದೊರೆಯುವಂತೆ ಅದ್ಭುತ ಮಾಡಿದಾತನೇ ಸ್ತೋತ್ರ

ಲೂಕ 5:6, ಯೋಹಾ 21:11

931. ಮೀನಿನ ಬಾಯಿಯ ಮೂಲಕ ರೂಪಾಯಿಯನ್ನು ಒದಗಿಸಿದಾತನೇ ಸ್ತೋತ್ರ ಮತ್ತಾ 17:27

932. ರಕ್ತ ಕುಸುಮ ರೋಗಿಯನ್ನು, ಪೇತ್ರನ ಅತ್ತೆಯನ್ನು ಜ್ವರದಿಂದ ಸ್ವಸ್ಥ ಮಾಡಿದಾತನೇ ಸ್ತೋತ್ರ ಮತ್ತಾ 9:22, 8:15

933. 5 ರೊಟ್ಟಿ 2 ಸಣ್ಣ ಮೀನುಗಳಿಂದ
5 ಸಾವಿರ ಜನರಿಗೆ ಊಟ ಮಾಡಿಸಿ
ಮಿಕ್ಕ ತುಂಡುಗಳಿಂದ 12 ಪುಟ್ಟಿ
ತುಂಬುವಂತೆ ಅದ್ಭುತ ಮಾಡಿ
ದಾತನೇ ಸ್ತೋತ್ರ ಮತ್ತಾ 14:20

934. 7 ರೊಟ್ಟಿ ಮತ್ತು ಕೆಲವು ಸಣ್ಣ
ಮೀನುಗಳಿಂದ 4 ಸಾವಿರ ಜನರಿಗೆ
ಊಟ ಮಾಡಿಸಿದಾತನೇ ಸ್ತೋತ್ರ ಮತ್ತಾ 15:38

935. ಮಹಾ ಯಾಜಕನ ಆಳಾದ ಮಲ್ಕನ
ಕತ್ತರಿಸಿದ ಕಿವಿಯನ್ನು ಸರಿಪಡಿಸಿ
ದಾತನೇ ಸ್ತೋತ್ರ ಲೂಕ 22:51

936. ನಿನ್ನನ್ನು ಕೊಲ್ಲಬೇಕೆಂದಿದ್ದವರ
ಮಧ್ಯದಲ್ಲಿ ಅದ್ಭುತವಾಗಿ ಹಾದು
ಹೊರಟು ಹೋದಾತನೇ ಸ್ತೋತ್ರ ಲೂಕ 4:30

937. ನಿನ್ನನ್ನು ಹಿಡಿಯಲು ಬಂದ
ಸೈನಿಕರನ್ನು ಹಿಂದೆ ಸರಿದು ನೆಲದ
ಮೇಲೆ ಬೀಳುವಂತೆ ಮಾಡಿದ
ಯೇಸುವೇ ಸ್ತೋತ್ರ ಯೋಹಾ 18:6

938. ದೆವ್ವವನ್ನು ಗದರಿಸಿ ಮೂರ್ಛಾ
ರೋಗಿಯನ್ನು ವಾಸಿಮಾಡಿದ
ಯೇಸುವೇ ಸ್ತೋತ್ರ ಮತ್ತಾ 17:18

939. ನಿನ್ನ ಶಾಪಕ್ಕೊಳಗಾದ ಅಂಜೂರದ
ಮರ ಒಣಗಿ ಹೋದದ್ದಕ್ಕಾಗಿ ಸ್ತೋತ್ರ ಮತ್ತಾ 21:20

940. ಮನುಷ್ಯರ ಪಾಪದ ಹೃದಯವನ್ನು
ನಿನ್ನ ಪರಿಶುದ್ಧ ರಕ್ತದಿಂದ ತೊಳೆದು
ಅವನನ್ನು ನೂತನ ಸೃಷ್ಟಿಯಾಗಿ ಮಾಡಿ
ದಾತನೇ ಈ ಮಹತ್ವಕ್ಕಾಗಿ ಸ್ತೋತ್ರ 2 ಕೊರಿ 5:17

## ಸತ್ಯವೇದದಲ್ಲಿರುವ ನಿನ್ನ ವಾಗ್ದಾನಗಳಿಗಾಗಿ ಸ್ತೋತ್ರ

941. ನನ್ನನ್ನು ಬೇಟೆಗಾರನ ಬಲೆಯಿಂದಲೂ
ಮರಣಕರವಾದ ವ್ಯಾಧಿಯಿಂದಲೂ ತಪ್ಪಿಸು
ವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:3

942. ತನ್ನ ರೆಕ್ಕೆಗಳಿಂದ ನಿನ್ನನ್ನು ಹೊದಿಸು
ವನೆಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:4

943. ತನ್ನ ಸತ್ಯತೆಯು ನಿನಗೆ ಖೇಡ್ಯವೂ
ಗುರಾಣಿಯೂ ಆಗಿರುವುದಕ್ಕೆ ಸ್ತೋತ್ರ ಕೀರ್ತ 91:4

944. ಇರುಳಲ್ಲಿ ಭಯ ಹುಟ್ಟಿಸುವ ಯಾವ
ದಕ್ಕೂ ಹಗಲಲ್ಲಿ ಹಾರಿ ಬರುವ
ಬಾಣಕ್ಕೂ ಕತ್ತಲಲ್ಲಿ ಸಂಚರಿಸುವ
ವಿಪತ್ತಿಗೂ ಹಾನಿಕರವಾದ ಮಧ್ಯಾಹ್ನದ
ಕೇಡಿಗೂ ಅಂಜುವ ಕಾರಣವಿಲ್ಲವೆಂಬ
ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:5-6

945. ಮಗ್ಗುಲಲ್ಲಿ ಸಾವಿರ ಜನರೂ ನಿನ್ನ
ಬಲಗಡೆಯಲ್ಲಿ ಹತ್ತು ಸಾವಿರ ಜನರೂ
ಸತ್ತು ಬಿದ್ದರೂ ನಿನಗೇನು ತಟ್ಟದು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:10

946. ಯಾವ ಕೇಡು ಸಂಭವಿಸದು
ಉಪದ್ರವವು ನಿನ್ನ ಗುಡಾರದ
ಸಮೀಪಕ್ಕೂ ಬಾರದು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:10

947. ನೀನು ಹೋಗುವಲ್ಲೆಲ್ಲಾ ನಿನ್ನನ್ನು
ಕಾಯುವುದಕ್ಕೆ ನಿನ್ನ ವಿಷಯವಾಗಿ
ತನ್ನ ದೂತರಿಗೆ ಅಪ್ಪಣೆ ಕೊಡುವೆನು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:11

948. ನಿನ್ನ ಕಾಲು ಕಲ್ಲಿಗೆ ತಗಲದಂತೆ
ಅವರು ನಿನ್ನನ್ನು ಕೈಗಳಲ್ಲಿ ಎತ್ತಿ
ಕೊಳ್ಳುವರು ಎಂಬ ವಾಗ್ದಾನ
ಕ್ಕಾಗಿ ಸ್ತೋತ್ರ ಕೀರ್ತ 91:12

949. ಸಿಂಹಗಳ ಮೇಲೆ ನಡೆದು ಪ್ರಾಯದ
ಸಿಂಹವನ್ನು ಘಟಸರ್ಪವನ್ನು ತುಳಿದು
ಬಿಡುವಿ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:23

950. ಅವನು ನಿನ್ನಲ್ಲಿ ಆಸಕ್ತನಾಗಿರುವುದರಿಂದ ಅವನನ್ನು ರಕ್ಷಿಸುವೆನು. ನನ್ನ ನಾಮವನ್ನು ಅರಿತವನಾಗಿರುವುದರಿಂದ ಅವನನ್ನು ಉದ್ಧರಿಸುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:4

951. ನನಗೆ ಮೊರೆಯಿಡುವಾಗ ಸದುತ್ತರವನ್ನು ದಯಪಾಲಿಸುವೆನು. ಇಕ್ಕಟ್ಟಿನಲ್ಲಿ ಹತ್ತಿರವಿದ್ದು ಅವನನ್ನು ತಪ್ಪಿಸಿ ಘನಪಡಿಸುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:15

952. ದೀರ್ಘಾಯುಷ್ಯವನ್ನು ಅನುಗ್ರಹಿಸಿ ಅವನನ್ನು ತೃಪ್ತಿಪಡಿಸುವೆನು ನನ್ನ ವಿಶೇಷವಾದ ರಕ್ಷಣೆಯನ್ನು ತೋರಿಸುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 91:16

953. ಕರ್ತನು ತನ್ನ ಜನರನ್ನು ಬೇಡವೆಂದು ತಳ್ಳಿ ಬಿಡುವುದಿಲ್ಲವೆಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 94:14

## ಕರ್ತನಿಗೆ ಭಯಪಟ್ಟು ಜೀವಿಸುವವನು ಈ ರೀತಿ ಆಶೀರ್ವಾದಗಳನ್ನು ಹೊಂದುವನು

954. ನಿನ್ನ ಕಷ್ಟಾರ್ಜಿತವನ್ನು ನೀನು ಅನುಭವಿಸುವಿ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:2
955. ನಿನಗೆ ಶುಭವಿರುವುದು ಒಳ್ಳೇ ಭಾಗ್ಯವಿರುವುದು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:2
956. ಅಂತಃಪುರದಲ್ಲಿರುವ ನಿನ್ನ ಹೆಂಡತಿಯು ಫಲಭರಿತವಾದ ದ್ರಾಕ್ಷಾಲತೆಯಂತಿರುವಳು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:3
957. ನಿನ್ನ ಸಂಗಡ ಊಟದ ಮನೆಯ ಸುತ್ತಲೂ ಕೂತುಕೊಳ್ಳುವ ನಿನ್ನ ಮಕ್ಕಳು ಎಣ್ಣೇ ಮರದ ಸಸಿಗಳಂತಿರುವರು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:3
958. ಚೀಯೋನಿನಲ್ಲಿರುವ ಕರ್ತನು ನಿನ್ನನ್ನು ಆಶೀರ್ವದಿಸಲಿ, ಜೀವಮಾನವೆಲ್ಲಾ ಯೆರೂಸಲೇಮಿನ ಸೌಭಾಗ್ಯವನ್ನು ನೋಡುವವನಾಗು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:5

959. ಮಕ್ಕಳ ಮಕ್ಕಳನ್ನು ಕಾಣುವವನಾಗು ಇಸ್ರಾಯೇಲ್ಯರಿಗೆ ಶುಭವಾಗಲಿ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 128:6

960. ನಿನ್ನ ಸಂತತಿಯವರ ಮೇಲೆ ನನ್ನ ಆಶೀರ್ವಾದವನ್ನು ಸುರಿಸುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 44:3

961. ನಿನ್ನೊಡನೆ ಹಾರಾಡುವವನ ಸಂಗಡ ನಾನೇ ಹೋರಾಡಿ ನಿನ್ನ ಮಕ್ಕಳನ್ನು ಉದ್ಧರಿಸುವೆನು ಎಂಬ ವಾಗ್ದಾನ ಕ್ಕಾಗಿ ಸ್ತೋತ್ರ ಯೆಶಾ 49:25

962. ನಿನ್ನ ಮಕ್ಕಳೆಲ್ಲರೂ ಕರ್ತನಿಂದ ಶಿಕ್ಷಿತರಾಗುವರು. ಅವರಿಗೆ ಅಧಿಕ ಸುಕ್ಷೇಮ ಉಂಟಾಗುವದು. ಮಕ್ಕಳ ಸಮಾಧಾನ ದೊಡ್ಡದಾಗಿರುವದು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 54:13

963. ಬೆಟ್ಟಗಳು, ಸ್ಥಳವನ್ನು ಬಿಟ್ಟು ಹೋದಾವು. ಗುಡ್ಡಗಳು ಕದಲಿಯಾವು, ಆದರೆ ನನ್ನ ಕೃಪೆಯು ನಿನ್ನನ್ನು ಬಿಟ್ಟು ಹೋಗದು ಎಂದು ನಿನ್ನನ್ನು ಕರುಣಿಸುವ ಕರ್ತನು ಹೇಳುತ್ತಾ ನೆಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 54:10

964. ನನ್ನ ಕೃಪೆಯು ನಿನಗೆ ಸಾಕು, ಬಲಹೀನತೆಯಲ್ಲಿಯೇ ನನ್ನ ಬಲವು ಪೂರ್ಣ ಸಾಧಕವಾಗುತ್ತದೆ ಎಂಬ ವಾಗ್ದಾನಕ್ಕಾಗಿ ಸ್ತೋತ್ರ 2 ಕೊರಿ 12:9

965. ನಿನಗೆ ಎರಡರಷ್ಟು (ಸುಖವನ್ನು) ದಯಪಾಲಿಸುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಜೆಕ 9:12

966. ಪ್ರಾಯದ ಸಿಂಹಗಳಾದರೋ ಹೊಟ್ಟೆಗಿಲ್ಲದೆ ಹಸಿದಾವು ಕರ್ತನ ಸನ್ನಿಧಾನದಲ್ಲಿ ಬೇಡಿಕೊಳ್ಳುವವರಿಗೆ ಯಾವ ಮೇಲಿಗೂ ಕಡಿಮೆಯಿಲ್ಲ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 34:10

967. ಕರ್ತನು ನಿನ್ನನ್ನು ಉಪದೇಶಿಸಿ ನಡೆಯಬೇಕಾದ ಮಾರ್ಗವನ್ನು ತಿಳಿಸುವೆನು. ನಿನ್ನನ್ನು ಕಟಾಕ್ಷಿಸಿ ಆಲೋಚನೆ ಹೇಳುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 32:8

968. ಕಷ್ಟಕಾಲದಲ್ಲಿ ಮೊರೆಯಿಡು ಬಿಡಿಸುವೆನು, ನನ್ನನ್ನು ನೋಡಿ ಕರೆ ನಾನು ನಿನ್ನನ್ನು ಬಿಡುಗಡೆ ಮಾಡುವೆನು, ನೀನು ನನ್ನನ್ನು ಮಹಿಮೆಪಡಿಸುವಿ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಕೀರ್ತ 50:15

969. ನನ್ನನ್ನು ಕೇಳಿಕೋ ನಾನು ನಿನಗೆ
ಸದುತ್ತರವನ್ನು ದಯಪಾಲಿಸಿ ನಿನಗೆ
ತಿಳಿಯದ ಮಹತ್ತಾದ ಗೂಡಾರ್ಥ
ಗಳನ್ನು ಗೋಚರಪಡಿಸುವೆನು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಯೆರೆ 33:3

970. ಬೇಡಿಕೊಳ್ಳಿರಿ ನಿಮಗೆ ದೊರೆಯು
ವದು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಮತ್ತಾ 7:7

971. ಹುಡುಕಿರಿ ನಿಮಗೆ ಸಿಕ್ಕುವುದು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಮತ್ತಾ 7:7

972. ತಟ್ಟಿರಿ ನಿಮಗೆ ತೆರೆಯುವುದು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಮತ್ತಾ 7:7

973. ಇಬ್ಬರು ಮೂವರು ನನ್ನ ಹೆಸರಿನಲ್ಲಿ
ಎಲ್ಲಿ ಕೂಡಿ ಬಂದಿರುತ್ತಾರೋ ಅಲ್ಲಿ
ಅವರ ಮಧ್ಯದಲ್ಲಿ ನಾನು ಇದ್ದೇನೆ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಮತ್ತಾ 18:20

974. ನಾನು ಯುಗದ ಸಮಾಪ್ತಿಯವರೆಗೂ
ಎಲ್ಲಾ ದಿವಸ ನಿಮ್ಮ ಸಂಗಡ ಇರು
ತ್ತೇನೆ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಮತ್ತಾ 28:20

975. ನೀನು ಭಯಪಡಬೇಡ ನಾನು ನಿನ್ನ ಸಂಗಡ ಇರುತ್ತೇನೆ ದಿಗ್ಭ್ರಮೆ ಗೊಳ್ಳದಿರು ನಾನು ನಿನ್ನ ದೇವರು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 41:10

976. ನಾನು ನಿನ್ನನ್ನು ಬಲಪಡಿಸುತ್ತೇನೆ ನಿನಗೆ ಸಹಾಯ ಮಾಡುತ್ತೇನೆ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 41:10

977. ನನ್ನ ಧರ್ಮದ ಬಲಗೈಯನ್ನು ನಿನಗೆ ಆಧಾರ ಮಾಡುತ್ತೇನೆ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 41:10

978. ನಿಮ್ಮಲ್ಲಿ ಯಾವನಿಗಾದರೂ ಜ್ಞಾನ ಕಡಿಮೆಯಾಗಿದ್ದರೆ ಅವನು ದೇವ ರನ್ನು ಕೇಳಿಕೊಳ್ಳಲಿ, ಅದು ಅವನಿಗೆ ದೊರಕುವದು. ದೇವರು ಹಂಗಿಸದೆ ಎಲ್ಲರಿಗೂ ಉದಾರ ಮನಸ್ಸಿನಿಂದ ಕೊಡುವವನಾಗಿರುತ್ತಾನೆ ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯಾಕೋ 1:5

979. ಭಯಪಡಬೇಡ ನಾನು ನಿನ್ನೊಂದಿಗಿರುವೆನು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 41:13

980. ನಿನ್ನ ಜೀವಮಾನದಲ್ಲೆಲ್ಲಾ
ಒಬ್ಬನೂ ನಿನ್ನ ಮುಂದೆ ನಿಲ್ಲನು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಹೋ 1:5

981. ನಾನು ನಿನ್ನನ್ನು ಕೈಬಿಡುವುದಿಲ್ಲ,
ತೊರೆಯುವುದಿಲ್ಲ, ದೃಢಚಿತ್ತ
ನಾಗಿರು, ಧೈರ್ಯದಿಂದಿರು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಹೋ 1:6

982. ಒಂದು ಕಾಲವುಂಟು ನಿನ್ನ
ನಿರೀಕ್ಷೆ ನಿರರ್ಥಕವಾಗದು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಜ್ಞಾನೋ 23:18

983. ಕರ್ತನು ನಿಮಗೋಸ್ಕರ ಯುದ್ಧ
ಮಾಡುವನು ನೀವಂತೂ ಸುಮ್ಮನಿರ್ರಿ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ವಿಮೋ 14:14

984. ಈ ಹೊತ್ತು ನೋಡುವ ಐಗುಪ್ತ್ಯ
ರನ್ನು ಇನ್ನು ಮುಂದೆ ಎಂದಿಗೂ
ನೋಡುವುದಿಲ್ಲ ಎಂಬ ವಾಗ್ದಾನ
ಕ್ಕಾಗಿ ಸ್ತೋತ್ರ ವಿಮೋ 14:13

985. ಯಾಕೋಬ್ಯರಲ್ಲಿ ಶಕುನ ನೋಡು
ವುದು ಇಲ್ಲ ಇಸ್ರಾಯೇಲ್ಯರಲ್ಲಿ
ಕಣಿ ಕೇಳುವುದೂ ಇಲ್ಲವೆಂಬ
ವಾಗ್ದಾನಕ್ಕಾಗಿ ಸ್ತೋತ್ರ ಅರಣ್ಯ 23:23

986. ಒಬ್ಬ ಹೆಂಗಸು ತಾನು ಹೆತ್ತ ಮಗು
ವಿನ ಮೇಲೆ ಕರುಣೆಯಿಡದೆ ತನ್ನ
ಮೊಲೆ ಕೂಸನ್ನು ಮರೆತಾಳು,
ನಾನಾದರೋ ನಿನ್ನನ್ನು ಮರೆಯೆ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 49:15

987. ಇಗೋ, ನನ್ನ ಅಂಗೈಯಲ್ಲಿ ನಿನ್ನನ್ನು
ಚಿತ್ರಿಸಿದ್ದೇನೆ. ನಿನ್ನ ಪೌಳಿಗೋಡೆಗಳು
ಸದಾ ನನ್ನ ಕಣ್ಣೆದುರಿನಲ್ಲಿವೆ ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 49:16

988. ನಾನು ನಿನ್ನ ಮುಂದೆ ಹೋಗಿ
ದಿಣ್ಣೆಗಳನ್ನು ಸರಿಮಾಡುವೆನು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 45:2

989. ನೀನು ಜಲರಾಶಿಯನ್ನು ಹಾದು ಹೋಗು
ವಾಗ ನಾನು ನಿನ್ನ ಸಂಗಡ ಇರುವೆನು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 43:2

990. ನೀನು ನದಿಗಳನ್ನು ದಾಟುವಾಗ
ಅವು ನಿನ್ನನ್ನು ಮುಳುಗಿಸವು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 43:2

991. ನೀನು ಉರಿಯಲ್ಲಿ ನಡೆಯುವಾಗ
ಕಂದದಿರುವಿ; ಜ್ವಾಲೆಯು ನಿನ್ನನ್ನು
ದಹಿಸದು ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 43:2

992. ನೀವು ಅನೇಕ ಜನರಿಗೆ ಸಾಲ
ಕೊಡುವಿರೇ ಹೊರತು ಸಾಲ
ತೆಗೆದುಕೊಳ್ಳುವದಿಲ್ಲ ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಧರ್ಮೋ॰ 28:12

993. ಆತನು ಇತರರಿಗೆ ನಿಮ್ಮನ್ನು
ಅಧೀನ ಮಾಡದೆ ಎಲ್ಲರಿಗೂ
ಶಿರಸ್ಸನ್ನಾಗಿಯೇ ಮಾಡುವನು;
ನೀವು ಎಲ್ಲರಿಗಿಂತಲೂ ಮೇಲಣ
ವರಾಗಿರುವಿರೇ ಹೊರತು
ಕೆಳಗಣದವರಾಗುವದಿಲ್ಲ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಧರ್ಮೋ॰ 28:14

994. ನಾನೇ ಕರ್ತನು ನನ್ನನ್ನು ನಿರೀಕ್ಷಿಸಿ
ಕೊಂಡವರು ಆಶಾಭಂಗಪಡರು
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೆಶಾ 49:23

995. ಕರ್ತನಾದ ಯೇಸುವಿನ ಮೇಲೆ
ನಂಬಿಕೆಯಿಡು. ಆಗ ನೀನು ರಕ್ಷಣೆ
ಹೊಂದುವಿ ನಿನ್ನ ಮನೆಯವರೆಲ್ಲರೂ
ರಕ್ಷಣೆ ಹೊಂದುವರು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಅ.ಕೃ 16:31

996. ನಿತ್ಯ ಜೀವವನ್ನು ಕೊಡುತ್ತೇನೆಂದು
ವಾಗ್ದಾನ ಮಾಡಿದ ಕರ್ತನೇ ಸ್ತೋತ್ರ 1 ಯೋಹಾ 2:25

997. ನಿಶ್ಚಯವಾಗಿ ನಾನು ನಿನ್ನನ್ನು
ಆಶೀರ್ವದಿಸೇ ಆಶೀರ್ವದಿಸುವೆನು
ನಿನ್ನನ್ನು ಹೆಚ್ಚಿಸೇ ಹೆಚ್ಚಿಸುವೆನು ಎಂಬ
ವಾಗ್ದಾನಕ್ಕಾಗಿ ಸ್ತೋತ್ರ ಇಬ್ರಿ 6:14

998. ನಾನು ಒಂದು ಸ್ಥಳವನ್ನು ನಿಮ
ಗೋಸ್ಕರ ಸಿದ್ಧಮಾಡಲು ಹೋಗು
ತ್ತೇನೆ. ಸಿದ್ಧವಾದ ಮೇಲೆ ನಾನು
ತಿರುಗಿ ಬಂದು ನಿಮ್ಮನ್ನು ನನ್ನೊಡನೆ
ಸೇರಿಸಿಕೊಳ್ಳುವೆನು ಎಂದು ಅಭಯ
ಕೊಟ್ಟಿರುವದಕ್ಕಾಗಿ ಸ್ತೋತ್ರ ಯೋಹಾ 14:2,3

999. ಶಾಂತಿಯನ್ನು ನಿಮಗೆ ಬಿಟ್ಟು
ಹೋಗುತ್ತೇನೆ ನನ್ನಲ್ಲಿರುವಂಥ
ಶಾಂತಿಯನ್ನು ನಿಮಗೆ ಕೊಡುತ್ತೇನೆ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಯೋಹಾ 14:27

1000. ಇಗೋ ಬೇಗನೇ ಬರುತ್ತೇನೆ
ಎಂಬ ವಾಗ್ದಾನಕ್ಕಾಗಿ ಸ್ತೋತ್ರ ಪ್ರಕ 22:7

**"ಆಮೆನ್, ಕರ್ತನಾದ ಯೇಸುವೇ, ಬಾ"**

**ಪ್ರಕಟಣೆ 22:20**

# ನೀವು ಓದಿದ್ದೀರಾ

| | |
|---|---|
| 165. ಬರ್ಮಾದ ಮಿಷನರಿ ಜಾಡ್ಸನ್‌ನ ಕಥೆ | 10.00 |
| 166. ಸಾಧು ಸುಂದರ್‌ಸಿಂಗ್ | 10.00 |
| 167. ರೂತಳ ಚರಿತ್ರೆ | 6.00 |
| 168. ಜೀವಿತದ ನೈಜತೆ | 10.00 |
| 169. ಪವಿತ್ರ ಪಾದದ ಉಪದೇಶ | 10.00 |
| 170. ಯೇಸುವಿನೊಂದಿಗೆ ಪ್ರಾರ್ಥನೆಯಲ್ಲಿ | 15.00 |
| 171. ಕಾಬೂ | 10.00 |
| 172. 101 ಬೈಬಲ್ ಅಧ್ಯಯನಗಳು | 30.00 |
| 173. ದೈವಿಕ ಸ್ವಸ್ಥತೆಯೂ ಆರೋಗ್ಯವೂ | 15.00 |
| 174. ದೃಢವಾದ ನಂಬಿಕೆ | 6.00 |
| 175. ಸತ್ಯವೇದ ಮಧುರವೇದ | 6.00 |
| 176. ಕೊರಿಯಾ ದೇಶದ ಉಜ್ಜೀವನ | 6.00 |
| 177. ಪವಿತ್ರವಾದ ಕ್ರೈಸ್ತ ಜೀವಿತ | 15.00 |
| 178. ನಿತ್ಯಕ್ಕೆ ಮತ್ತು ನಿತ್ಯತ್ವಕ್ಕೆ | 15.00 |
| 179. ಆತ್ಮ ಪ್ರಾಣ ಶರೀರದಲ್ಲಿ ಪರಿಶುದತ್ತೆ | 15.00 |
| 180. ಆತ್ಮಗಳನ್ನು ಆದಾಯ ಮಾಡುವುದು ಹೇಗೆ | 6.00 |
| 181. ವಿಲಿಯಂ ಕೇರಿಯ ಜೀವನ ಚರಿತ್ರೆ | 10.00 |
| 182. ಸಾಧುಸುಂದರ್‌ಸಿಂಗ್ ಹೇಳಿದ ಸಣ್ಣ ಕಥೆಗಳು | 10.00 |
| 183. ಪ್ರಾರ್ಥಿಸುವ ಕ್ರೈಸ್ತನು | 10.00 |
| 184. ಮುಪ್ಪಿನಲ್ಲಿಯೂ ಬಲ | 6.00 |
| 185. ನಾಲ್ಕನೆಯ ಮನುಷ್ಯ | 6.00 |
| 186. ಪರಲೋಕ ರಹಸ್ಯಗಳು | 15.00 |
| 187. ಪಂಡಿತ ರಮಾಬಾಯಿ | 10.00 |

| | | |
|---|---|---|
| 188. | ಪ್ರಾರ್ಥಿಸಬೇಕಾದ ವಿಧಗಳು | 10.0 |
| 189. | ಹಾಲೂ ಮತ್ತು ಜೇನು - 66 | 10 |
| 190. | ಸಂಸೋನನ ಶೋಧನೆ | [illegible] |
| 191. | ಸಹೋದರ ಭಕ್ತಸಿಂಗ್‌ರವರ ಆತ್ಮಕಥೆ | [illegible] |
| 192. | ಯೇಸುಕ್ರಿಸ್ತನು ನನಗಾಗಿ ಶಿಲುಬೆಗೇರಿಸಲ್ಪಟ್ಟರು | 10.00 |
| 193. | ಆತ್ಮೀಕ ವಂಚನೆ | 10.00 |
| 194. | ಮಕ್ಕಳ ಕಥೆಗಳು | 10.00 |
| 195. | ಆತ್ಮೀಕ ಕಥೆಗಳು | 10.00 |
| 196. | ನಿನ್ನ ಹತ್ತಿರ ಏನಿದೆ? | 6.00 |
| 197. | ಭಕ್ತಿಯುಳ್ಳವನೇ ಕಳವಳಪಡಬೇಡ! | 6.00 |
| 198. | ಅಂಜೂರದ ಚಿಗುರೂ ಕರ್ತನ ಬರೋಣವೂ | 30.00 |
| 199. | ಪ್ರಪಂಚ ಮುಟ್ಟುವ ಪ್ರಾರ್ಥನೆ | 30.00 |
| 200. | ಸ್ವರ್ಗ ಮತ್ತು ನರಕದ ಪ್ರಕಟಣೆಗಳು | 10.0 |
| 201. | ನೂರು ಪಟ್ಟು ಆಶೀರ್ವಾದಗಳು | 6. |
| 202. | ಹಗಲು ಇರುವವರೆಗೆ | 6.0 |
| 203. | ಆಶ್ರಯ ದುರ್ಗವಾಗಿದ್ದಾನೆ! | 6.00 |
| 204. | ಬತ್ತದ ಜೀವದ ಬುಗ್ಗೆ | 6.00 |
| 205. | ಕೊಲ್ಲುವ ಭಯಂಕರ ಪಾಪಗಳು ಏಳು | 10.00 |
| 206. | ಪ್ರಾರ್ಥನಾ ವೀರ ಜಾನ್ ಹೈಡ್ | 10.0 |
| 207. | ಮಾರ್ಟಿನ್ ಲೂಥರ್ | 10.0 |
| 208. | ಜಯಶಾಲಿಯಾದ ಕ್ರಿಸ್ತೀಯ ಜೀವಿತವನ್ನು ಜೀವಿಸುವುದು ಹೇಗೆ? | 20.00 |
| 209. | ದೈವೀಕ ಪ್ರೀತಿ | 6.0 |
| 210. | ಅಗ್ನಿಯ ಮೂಲಕ ಉತ್ತರ ಕೊಡುವ ದೇವರು | 10.0 |

# ಆಧ್ಯಾತ್ಮಿಕ ಪುಸ್ತಕಗಳು



ಆತ್ಮೀಕ ಜೀವಿತದಲ್ಲಿ ಬೆಳೆಯಲು ಮತ್ತು ಆತ್ಮನ ಬಲವನ್ನು ಹೊಂದಿಕೊಳ್ಳಲು ಆಧ್ಯಾತ್ಮಿಕ ಪುಸ್ತಕಗಳು ಅತ್ಯವಶ್ಯ

ಸಹೋದರ ಸ್ಯಾಮ್ ಜೆಬದುರೈರವರು, ಸುಮಾರು 700ಕ್ಕಿಂತ ಹೆಚ್ಚು ತಮಿಳು ಪುಸ್ತಕಗಳನ್ನು ಬರೆದಿರುವರು.

ಹದಿನಾರು ವರುಷಗಳ ಕಾಲ ಸರ್ಕಾರಿ ಸೇವೆಯಲ್ಲಿ ತಮ್ಮ ಜೀವಿತವನ್ನು ಕಳೆದ ನಂತರ, ತಮ್ಮ ಉದ್ಯೋಗಕ್ಕೆ ರಾಜಿನಾಮೆ ನೀಡಿ, 1985ರಿಂದ ಇತ್ತೀಚೆಗೆ ಅವರು ಪೂರ್ಣಾವಧಿ ಸೇವೆಯಲ್ಲಿ ತಮ್ಮನ್ನು ಕರ್ತನಿಗೆ ಮುಡುಪಾಗಿಟ್ಟಿದ್ದಾರೆ. ಈ ಸೇವೆಯಲ್ಲಿ ಸಹೋದರ ಸ್ಯಾಮ್ ಜೆಬದುರೈರವರು ದೇವರ ವಾಕ್ಯವನ್ನು ಸಾರುವುದರ ಮೂಲಕ ಮತ್ತು ಬರವಣಿಗೆಯ ಮೂಲಕ ಸಾವಿರಾರು ಜನರನ್ನು ಕರ್ತನ ಬಳಿಗೆ ನಡೆಸಿದ್ದಾರೆ.

ಈ ಆಧ್ಯಾತ್ಮೀಕ ಪುಸ್ತಕಗಳಿಗೆ ಪ್ರೋತ್ಸಾಹ ನೀಡಿ, ಕನ್ನಡ ಭಾಷೆಯಲ್ಲಿ ಅವರ ಅನೇಕ ಪುಸ್ತಕಗಳು ಭಾಷಾಂತರವಾಗಿ ಹೊರ ಬರುವಂತೆ ತೀವ್ರವಾಗಿ ಕರ್ತನನ್ನು ಪ್ರಾರ್ಥಿಸಿರಿ.

ಈ ಪುಸ್ತಕಗಳಿಗಾಗಿಯೂ, ಎಂ.ಪಿ.3., ಸಿ.ಡಿ., ವಿ.ಸಿ.ಡಿ., ಗಳಿಗಾಗಿಯೂ ಮತ್ತು ನಮ್ಮಲ್ಲಿ ಪ್ರಕಟವಾಗುವ ಮಾಸಪತ್ರಿಕೆ "ಅನುದಿನದ ಆಹಾರ" ಎಂಬ ಕನ್ನಡ ದೈನಿಕ ಬರಹವನ್ನು ಹೊಂದಲು ನೀವು ಬಯಸುವುದಾದರೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ. ಕರ್ತನು ನಿಮ್ಮನ್ನು ಆಶೀರ್ವದಿಸಲಿ.

**Selvin Christopher George**

24th 'F' Cross, Ejipura, Viveknagar, Bangalore - 560 047.

Ph: 080 - 25712448